11) ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್ 97 (ಭಾಗ), ದಿ.06.05.1999
12) ಸರ್ಕಾರದ ಆದೇಶ ಸಂಖ್ಯೆ:ಕಂಇ 10 ಬಿ.ಎಸ್.ಸಿ. 2000 ದಿ.16.08.2000
13) ಸರ್ಕಾರದ ಆದೇಶ ಸಂಖ್ಯೆ:ಕಂಇ 250 ಬಿ.ಎಸ್.ಸಿ. 2001, ದಿ.4.12.2001
14) ಸರ್ಕಾರದ ಆದೇಶ ಸಂಖ್ಯೆ:ಕಂಇ 272 ಬಿ.ಎಸ್.ಸಿ. 2002, ದಿ.30.11.2002
15) ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಬಿ.ಎಸ್.ಸಿ. 2003, ದಿ.28.8.2003
16) ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಬಿ.ಎಸ್.ಸಿ. 2003, ದಿ.24.7.2004
17) ಸರ್ಕಾರದ ಆದೇಶ ಸಂಖ್ಯೆ:ಕಂಇ 1 ಬಿ.ಎಸ್.ಸಿ. 2005, ದಿ.8.8.2005
18) ಸರ್ಕಾರದ ಆದೇಶ ಸಂಖ್ಯೆ:ಕಂಇ 1 ಬಿ.ಎಸ್.ಸಿ. 2005, ದಿ.24.5.2006
19) ಸರ್ಕಾರದ ಆದೇಶ ಸಂಖ್ಯೆ:ಕಂಇ 1 ಬಿ.ಎಸ್.ಸಿ. 2005, ದಿ.07.10.2006

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿನ ಆದೇಶಗಳಲ್ಲಿ ಕಂದಾಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ 10450 ಗ್ರಾಮಸಹಾಯಕರನ್ನು ಮಿತವೇತನ (ಸ್ಟೈಫೆಂಡರಿ) ಹುದ್ದೆಗಳ ಆಧಾರದ ಮೇಲೆ 1978ನೇ ಸಾಲಿನಲ್ಲಿ 8941 ಹುದ್ದೆಗಳು, ನಂತರ 1982ನೇ ಸಾಲಿನಲ್ಲಿ 1509 ಹುದ್ದೆಗಳಂತೆ ಮಂಜೂರು ಮಾಡಲಾಗಿದೆ. ನಂತರ ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬಂದಿದ್ದು, ಸದರಿ ಗ್ರಾಮಸಹಾಯಕರುಗಳ ಸೇವೆಯ ಅಗತ್ಯತೆಯನ್ನು ಪರಿಗಣಿಸಿ, ಮಾಸಿಕ ನಿಗದಿತ ಸಂಭಾವನೆ ರೂ.1000/-ರ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ:(16)ರಲ್ಲಿನ ಆದೇಶದಲ್ಲಿ ದಿನಾಂಕ:1.4.2004 ರಿಂದ ದಿನಾಂಕ: 31.3.2005ರವರೆಗೆ ಮುಂದುವರಿಸಲಾಗಿತ್ತು. ಗ್ರಾಮಸಹಾಯಕ ಹುದ್ದೆಗಳ ಬಗ್ಗೆ ಕಂದಾಯ ಇಲಾಖೆಯಿಂದ ಸಂಪೂರ್ಣ ಅವಲೋಕನೆಗೆ ಒಳಪಟ್ಟು, ಮೇಲೆ ಓದಲಾದ ಕ್ರ.ಸಂ: 17ರಲ್ಲಿ ದಿ.1.4.2005 ರಿಂದ ದಿ.ಯ31.3.2006ರವರೆಗೆ (ಒಂದು ವರ್ಷದ ಅವಧಿಗೆ) ಮುಂದುವರೆಸಲು ಮತ್ತು ಅವರುಗಳ ಮಾಸಿಕ ಮಿತವೇತನವನ್ನು ರೂ.1000/- ರಿಂದ ರೂ.2000/- ಗಳವರೆಗೆ ಹೆಚ್ಚಿಸಲು ತೀರ್ಮಾನಿಸಿ ಆದೇಶ ಹೊರಡಿಸಲಾಗಿರುತ್ತದೆ. ಈ ಅವಧಿಯು ದಿ.31.3.06ಕ್ಕೆ ಮುಕ್ತಾಯಗೊಂಡಿದ್ದು, ಗ್ರಾಮಸಹಾಯಕರ ಹುದ್ದೆಗಳನ್ನು ಮುಂದುರಿಸುವುದು ಅವಶ್ಯಕವಾಗಿರುವುದರಿಂದ ತಾತ್ಕಾಲಿಕವಾಗಿ ಸದರಿ ಹುದ್ದೆಗಳನ್ನು ದಿ.1.4.06 ರಿಂದ 3 ತಿಂಗಳ ಅವಧಿಗೆ ಮುಂದುವರಿಸಲು ಹಾಗೂ ಕರ್ನಾಟಕ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳನ್ವಯ ಅಂತಿಮ ತೀರ್ಮಾನ ತೆಗೆದುಕೊಳ್ಳುವ ಷರತ್ತಿಗೆ ಒಳಪಟ್ಟು ಸದರಿ ಗ್ರಾಮಸಹಾಯಕರ ಹುದ್ದೆಗಳನ್ನು ದಿನಾಂಕ: 1.4.2006 ರಿಂದ ದಿ:30.6.2006ರವರೆಗೆ ಮೂರು ತಿಂಗಳ ಅವಧಿಗೆ ವಿಸ್ತರಿಸಿ ಮೇಲೆ ಓದಲಾದ (18)ರಲ್ಲಿ ಸರ್ಕಾರದ ಆದೇಶವನ್ನು ಹೊರಡಿಸಲಾಗಿದೆ. ಪುನಃ ಗ್ರಾಮಸಹಾಯಕರ ಸೇವೆಯ ಅಗತ್ಯತೆಯನ್ನು ಪರಿಗಣಿಸಿ ಸದರಿ ಹುದ್ದೆಗಳನ್ನು ದಿ:1.7.06 ರಿಂದ 31.3.2007ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲು ತೀರ್ಮಾನಿಸಿ ಮೇಲೆ ಓದಲಾದ (19)ರಲ್ಲಿ ಆದೇಶ ಹೊರಡಿಸಲಾಗಿದೆ. ಆದ್ದರಿಂದ ಲೆಕ್ಕಶೀರ್ಷಿಕೆ 20-29-00-201-1-015ರಲ್ಲಿ ಹಾಲಿ ಲಭ್ಯವಿರುವ ರೂ.220.58 ಲಕ್ಷಗಳಲ್ಲಿ ಒಂದು ತಿಂಗಳ ಮಿತವೇತನವನ್ನು ಬಿಡುಗಡೆಗೊಳಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂ 1 ಬಿಎಸ್.ಸಿ. 2005, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2006**

ಕಂದಾಯ ಇಲಾಖೆಯಲ್ಲಿರುವ ಒಟ್ಟು 10450 ಮಿತವೇತನ (ಸ್ಟೈಫೆಂಡರಿ) ಗ್ರಾಮಸಹಾಯಕರುಗಳ ಹುದ್ದೆಗಳನ್ನು ಈಗ ನೀಡುತ್ತಿರುವ ಮಾಸಿಕ ಮಿತವೇತನ ರೂ.2000/- (ರೂ.ಎರಡು ಸಾವಿರ ಮಾತ್ರ) ಗಳಂತೆ ದಿನಾಂಕ: 01.7.2006 ರಿಂದ ದಿ:31.3.2007 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿದ ಸಿಬ್ಬಂದಿಗೆ ಲೆಕ್ಕಶೀರ್ಷಿಕೆ 2029-00-201-1-015ರಲ್ಲಿ ಹಾಲಿ ಲಭ್ಯವಿರುವ ರೂ.220.58 ಲಕ್ಷಗಳಲ್ಲಿ ಒಂದು ತಿಂಗಳ ಮಿತವೇತನವನ್ನು ಬಿಡುಗಡೆಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 1624

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶದಲ್ಲಿನ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ :** ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 85 ಆಆಕೋ 2002 (ಭಾಗ-1) ದಿನಾಂಕ: 12.9.2006.

**ಪ್ರಸ್ತಾವನೆ :**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶದಲ್ಲಿ ಸೃಜಿಸಿ ಕಾಲ ಕಾಲಕ್ಕೆ ಮುಂದುವರಿಸಿಕೊಂಡು ಬಂದಿರುವ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಆರ್ಥಿಕ ಆಯೋಗ ಕೋಶದ ಅವಧಿಯನ್ನು 2005 ರಿಂದ 2010 ರವರೆಗೆ ಮುಂದುವರೆಸಿರುವುದರಿಂದ ಹುದ್ದೆಗಳು ಅಗತ್ಯವಾಗಿದ್ದು, ಖಾಯಂ ಮಾಡುವ ಕುರಿತು ಪ್ರಸ್ತಾಪಿಸಿರುತ್ತಾರೆ. ಆದ್ದರಿಂದ ಈ ಆದೇಶ.

| ಕ್ರ. ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಉಪ ಕಾರ್ಯದರ್ಶಿ:ಜಂಟಿ ಕಾರ್ಯದರ್ಶಿ | 1 |
| 2. | ಶಾಖಾಧಿಕಾರಿ | 1 |
| 3. | ಶೀಘ್ರಲಿಪಿಗಾರರು | 1 |
| 4. | ಸಹಾಯಕ | 1 |
| 5. | ಕಿರಿಯ ಸಹಾಯಕ | 1 |
| 6. | ವಾಹನ ಚಾಲಕ | 1 |
| | **ಒಟ್ಟು** | **06** |

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 74 ಸಸಿವಿ 2006, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶದ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಖಾಯಂಗೊಳಿಸಲಾಗಿದೆ.

| ಕ್ರ. ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಉಪ ಕಾರ್ಯದರ್ಶಿ:ಜಂಟಿ ಕಾರ್ಯದರ್ಶಿ | 1 |
| 2. | ಶಾಖಾಧಿಕಾರಿ | 1 |
| 3. | ಶೀಘ್ರಲಿಪಿಗಾರರು | 1 |
| 4. | ಸಹಾಯಕ | 1 |
| 5. | ಕಿರಿಯ ಸಹಾಯಕ | 1 |
| 6. | ವಾಹನ ಚಾಲಕ | 1 |
| | **ಒಟ್ಟು** | **06** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

ಪಿ.ಆರ್. 1625

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಶಿಷ್ಟಾಚಾರ-ವಿಮಾನ ನಿಲ್ದಾಣ) ಹುದ್ದೆಯನ್ನು ಉಪ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: ಮುಮಂ/ಆಕಾ/419/2006, ದಿ: 4.11.06.

**ಪ್ರಸ್ತಾವನೆ :**

ಮೇಲೆ ಓದಲಾದ ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿಯಲ್ಲಿ ಶ್ರೀ ರೆಜಿನಾಲ್ಡ್ ಜೆ.ಸಿ.ಡಿಸೋಜಾ, ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಶಿಷ್ಟಾಚಾರ-ವಿಮಾನ ನಿಲ್ದಾಣ) ಇವರಿಗೆ ಉಪ ಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡಿದ ನಂತರ ಅಲ್ಲಿಯೇ ಮುಂದುವರೆಸುವ ಸಲುವಾಗಿ ಪ್ರಸ್ತುತ ಇವರು ಹೊಂದಿರುವ ಅಧೀನ ಕಾರ್ಯದರ್ಶಿ ಹುದ್ದೆಯನ್ನು ಉಪ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸುವಂತೆ ಆದೇಶಿಸಲಾಗಿರುತ್ತದೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 315 ಸಅಸೇ 2006, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಅಧೀನ ಕಾರ್ಯದರ್ಶಿ (ಶಿಷ್ಟಾಚಾರ-ವಿಮಾನ ನಿಲ್ದಾಣ) ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಶ್ರೀ ರೆಜಿನಾಲ್ಡ್ ಜೆ.ಸಿ.ಡಿಸೋಜಾ ಇವರ ಸೇವಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರೂ. 10620-14960ರ ವೇತನ ಶ್ರೇಣಿಯ ಉಪ ಕಾರ್ಯದರ್ಶಿ ಹುದ್ದೆಯನ್ನಾಗಿ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 2026/ವೆಚ್ಚ-5/2006, ದಿ:14.11.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

ಪಿ.ಆರ್. 1626

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಜಗಳೂರು ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರಾದ ಶ್ರೀ ಹುಲುಗಪ್ಪ ಕಟ್ಟಿಮನಿ ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ - ಆದೇಶ.

**ಓದಲಾಗಿದೆ :**

1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಾವಣಗೆರೆ ಇವರ ಪತ್ರದ ಸಂಖ್ಯೆ.ಜಿಪಂದಾ:ಆ(4): ಎಂ.ವಿ.:ಸಿಆರ್-73:2006-07, ದಿ:26.7.06.

2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 27 ಇಎನ್‌ಕ್ಯೂ 06, ದಿನಾಂಕ:10.8.06.

3) ಶ್ರೀ ಹುಲುಗಪ್ಪ ಕಟ್ಟಿಮನಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ಮನವಿ ದಿನಾಂಕ 7.9.06.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿ: 26.7.2006ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಾವಣಗೆರೆ ಇವರು ಸರ್ಕಾರಕ್ಕೆ ವರದಿ ಮಾಡುತ್ತಾ ದಿನಾಂಕ:23.7.06 ರಂದು ಜಗಳೂರು ತಾಲ್ಲೂಕಿನ ಹೊಸಕೆರೆ ಗ್ರಾಮದಲ್ಲಿ ಶ್ರೀ ಪಿ. ಚನ್ನನಗೌಡ ಮತ್ತು ಅವರ ಕುಟುಂಬದ ಮೂರು ಸದಸ್ಯರು ಸಾಮೂಹಿಕ ಆತ್ಮಹತ್ಯೆ ಮಾಡಿಕೊಂಡ ಪ್ರಕರಣಕ್ಕೆ ಸಂಬಂಧಿಸಿದಂತೆ ದಿ:24.7.2006 ರಂದು ಮಾನ್ಯ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಾವಣಗೆರೆ ಇವರು ಹೊಸಕೆರೆ ಗ್ರಾಮಕ್ಕೆ ಭೇಟಿ ನೀಡಿದಾಗ ಶ್ರೀ ಹುಲುಗಪ್ಪ ಕಟ್ಟಿಮನಿ, ಇವರು ಕೇಂದ್ರ ಸ್ಥಾನದಲ್ಲಿ ಲಭ್ಯವಾಗದೇ ಇದ್ದು ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ ಹಾಗೂ ಕರ್ತವ್ಯ ಲೋಪವೆಸಗಿರುವುದರಿಂದ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ ಅಮಾನತ್ತಿನಲ್ಲಿಡುವಂತೆ ಸರ್ಕಾರವನ್ನು ಕೋರಿದ್ದರು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಾವಣಗೆರೆ ಇವರ ವರದಿಯನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 10.8.2006ರ ಆದೇಶದಲ್ಲಿ ಶ್ರೀ ಹುಲುಗಪ್ಪ ಕಟ್ಟಿಮನಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಜಗಳೂರು ಇವರನ್ನು ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಶ್ರೀ ಹುಲುಗಪ್ಪ ಕಟ್ಟಿಮನಿ, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ: 7.9.06ರ ಮನವಿಯಲ್ಲಿ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ದಾವಣಗೆರೆ ಇವರು ಈ ಪ್ರಕರಣದ ವಿಚಾರಣೆಗೆ ಬಂದಾಗ ತಾವು ಗೈರು ಹಾಜರಾಗಿದ್ದಕ್ಕೆ ಅನಾರೋಗ್ಯದ ನಿಮಿತ್ತವೇ ಹೊರತು ಬೇರ್ಯಾವ ಉದ್ದೇಶದಿಂದ ಕರ್ತವ್ಯಕ್ಕೆ ಗೈರು ಹಾಜರಾಗಲಿಲ್ಲ ಮತ್ತು ಕರ್ತವ್ಯ ಲೋಪ ಮಾಡಿಲ್ಲವೆಂದು ವಿನಂತಿಸಿ, ಮೃತ ಗುತ್ತಿಗೆದಾರನಿಗೆ ಅವರು ನಿರ್ವಹಿಸಿದ ಎಲ್ಲಾ ಕಾಮಗಾರಿಗಳಿಗೆ ಬಿಲ್ಲುಗಳನ್ನು ನಿಗದಿತ ಅವಧಿಯಲ್ಲಿ ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸಿದ್ದೇನೆ ಮತ್ತು ಎಲ್ಲಾ ಕಾಮಗಾರಿಗಳ ಬಿಲ್ಲುಗಳನ್ನು ಪಾವತಿಸಲಾಗಿದೆ ಎಂದು ವಿಭಾಗ ಕಛೇರಿಯಿಂದ ಪಡೆದ ವರದಿಯನ್ನು ಸಲ್ಲಿಸಿರುತ್ತಾರೆ ಮತ್ತು ತಮ್ಮ ಅಮಾನತ್ತನ್ನು ರದ್ದುಗೊಳಿಸಿ ಸೇವೆಯನ್ನು ಲೋಕೋಪಯೋಗಿ ಇಲಾಖೆಗೆ ಮುಂದಿನ ಸ್ಥಳ ನಿಯುಕ್ತಿಗಾಗಿ ಮರಳಿಸಲು ವಿನಂತಿಸಿರುತ್ತಾರೆ.

ಸರ್ಕಾರವು ಪ್ರಕರಣದ ವಿಷಯವನ್ನು ಕೂಲಂಕುಶವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 27 ಇಎನ್‌ಕ್ಯೂ 06, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ 10(5)(ಸಿ) ನಿಯಮದ ಪ್ರಕಾರ ಶ್ರೀ ಹುಲುಗಪ್ಪ ಕಟ್ಟಿಮನಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಜಗಳೂರು ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಸದರಿಯವರ ಅಮಾನತ್ತನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಮುಂದಿನ ಸ್ಥಳ ನಿಯುಕ್ತಿಗಾಗಿ ಇವರ ಸೇವೆಯನ್ನು ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ಹಿಂದಿರುಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1628

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ದೇವಸ್ಥಾನಗಳು ಮತ್ತು ಇತರೇ ಧಾರ್ಮಿಕ ಸಂಸ್ಥೆಗಳಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1964ರ ಅನ್ವಯ ನಿಗದಿಪಡಿಸಿರುವ **'ವರ್ಷಾಸನ'** ವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** ಧಾರ್ಮಿಕ ದತ್ತಿ ಆಯುಕ್ತರವರ ಪತ್ರ ಸಂ.ಎಸಿಟಿ/3/ಸಿಆರ್/9/2005-06 ದಿನಾಂಕ:8/6/2006 ಮತ್ತು ದಿನಾಂಕ:25.9.2006.

**ಪ್ರಸ್ತಾವನೆ :**

ಮೇಲೆ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ:8.6.2006ರಲ್ಲಿ ರಾಜ್ಯದಲ್ಲಿನ ದೇವಸ್ಥಾನಗಳು ಮತ್ತು ಇತರೇ ಧಾರ್ಮಿಕ ಸಂಸ್ಥೆಗಳ ನಾನ್ ಇನಾಂ ಜಮೀನುಗಳು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಅನ್ವಯ 1.3.1974 ರಿಂದ ಸರ್ಕಾರಕ್ಕೆ ವಿಹಿತವಾಗಿದ್ದು, ಸದರಿ ಜಮಿನುಗಳಿಗೆ ಪರಿಹಾರಾರ್ಥವಾಗಿ 1.3.1974 ರಿಂದ ವರ್ಷಾಸನವನ್ನು ಸಂಸ್ಥೆಗಳು ಅಸ್ತಿತ್ವದಲ್ಲಿರುವವರೆಗೆ ನೀಡಬೇಕಾಗಿರುತ್ತದೆ. ಭೂ ಕಂದಾಯದ ಮತ್ತು ನೀರಿನ ದರದ ಹತ್ತು ಪಟ್ಟು ಮೊತ್ತವನ್ನು ವರ್ಷಾಸನವನ್ನಾಗಿ ನಿಗದಿಪಡಿಸಲಾಗಿದೆ. ಆದರೆ ದಿನಾಂಕ:1.3.1974 ರಿಂದ ಭೂ ಸುಧಾರಣೆ ಜಾರಿಗೆ ಬರುವ ಮೊದಲು ಅಂದರೆ 1965ರಲ್ಲಿ ಭೂ ಕಂದಾಯ ನಿಗದಿಯಾಗಿದ್ದು, ತದನಂತರದಲ್ಲಿ ಇದು ಪರಿಕರಣೆಯಾಗದೇ ವರ್ಷಾಸನವನ್ನು ಪರಿಷ್ಕರಿಸಲಾಗದು. 1965ರಲ್ಲಿ ಕಂದಾಯವನ್ನು ನಿಗದಿಪಡಿಸಿರುವುದರಿಂದ ವರ್ಷಾಸನವನ್ನು 3 ಪಟ್ಟು ಹೆಚ್ಚಿಸುವುದು ಸೂಕ್ತವೆಂದು ದಿನಾಂಕ:28.12.2005 ರಂದು ನಡೆದ ಸಭೆಯಲ್ಲಿ ಮಾನ್ಯ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ರವರು ಸೂಚಿಸಿರುತ್ತಾರೆ.

2006-07ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲು ಕೋರಿರುವ ಹಿನ್ನೆಲೆಯಲ್ಲಿ ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತುತ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2506-00101-4-01-ಭೂ ಸುಧಾರಣೆಗಳು-ವರ್ಷಾಸನ-101 (ಯೋಜನೇತರ) ಇದರಡಿಯಲ್ಲಿ ರೂ.331.92 ಲಕ್ಷಗಳನ್ನು ಒದಗಿಸಿರುತ್ತದೆ. 2006-07ನೇ ಸಾಲಿನಲ್ಲಿ ಮೇಲ್ಕಂಡ ಉದ್ದೇಶಕ್ಕಾಗಿ ಒದಗಿಸಿರುವ ಅನುದಾನವನ್ನು ಉಪಯೋಗಿಸಿಕೊಳ್ಳಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಅನ್ವಯ ದೇವಸ್ಥಾನಗಳು ಮತ್ತು ಇತರೆ ಧಾರ್ಮಿಕ ಸಂಸ್ಥೆಗಳಿಗೆ ನಿಗದಿಪಡಿಸಿರುವ ವರ್ಷಾಸನವನ್ನು 3 ಪಟ್ಟು ಹೆಚ್ಚಿಸಿ ಆದೇಶ ಹೊರಡಿಸಲು ಕೋರಿಕೆ ಸಲ್ಲಿಸಿರುತ್ತಾರೆ. ಆದ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 141 ಮುಅಬಿ 2006, ಬೆಂಗಳೂರು, ದಿನಾಂಕ: 15ನೇ ನವೆಂಬರ್ 2006**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 2006-07ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2506-00-101-4-01-ಭೂಸುಧಾರಣೆಗಳು-ವರ್ಷಾಸನ-101 (ಯೋಜನೇತರ)ರಡಿ ರೂ.331.92 ಲಕ್ಷಗಳನ್ನು ಒದಗಿಸಿರುತ್ತದೆ. ಈ ಅನುದಾನವನ್ನು ಉಪಯೋಗಿಸಲು ಕರ್ನಾಟಕ ಭೂ ಸುಧಾರಣೆ ಕಾಯಿದೆ 1961ರ ಅನ್ವಯ ದೇವಸ್ಥಾನಗಳು ಮತ್ತು ಇತರೇ ಧಾರ್ಮಿಕ ಸಂಸ್ಥೆಗಳಿಗೆ ನಿಗದಿಪಡಿಸಿರುವ ವರ್ಷಾಸನವನ್ನು 3 ಪಟ್ಟು ಹೆಚ್ಚಿಸಿ, ಮಂಜೂರು ಮಾಡಲು 2006-07ನೇ ಸಾಲಿನಿಂದ ಜಾರಿಗೆ ಬರುವಂತೆ ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್. 1632

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಕಂದಾಯ ಇಲಾಖೆ (ಮುಜರಾಯಿ).

## FINANCE SECRETARIAT

**Sub :** Revision of Rates of hiring of vehicles in Bangalore and other cities for officers who visit these places for official work.

**Read :** 1) Government Order No. FD 3 BEM 1998 dated 5.11.1998.
2) Government Order No. DPAR 301 SAS 2000 dated 15.9.2000.
3) D.O. Letter No. ಉಜಿಅ ಆಶಾ 01/2006 dated 30.6.2006 from Deputy Commissioner, Udupi.

**Preamble:**

In Government Order read at (1) above, with a view to bring economy in administrative expenditure certain measures were introduced. One of the measures is usage of petrol. It is stated there in that the officers who are provided official cars in their work place coming to Bangalore from far of districts should travel by train and that they may hire yellow board taxies for local conveyance in Bangalore subject to limit of Rs. 600-00 per day. In Government Order read at (2) above, the Principal Secretaries, Secretaries to Government and major Heads of Department, while on Official tour outside the State are permitted to hire vehicle for the purpose of official duty not exceeding the rates mentioned below if they are not provided with an official vehicle.

(a) For Delhi, Mumbai, Chennai and Kolkatta - Not exceeding Rs. 800-00 per day.
(b) For other state capitals - not exceeding Rs. 600-00 per day.

In D.O. letter read at (3) above, Deputy Commissioner, Udupi has stated that on account of increase in the cost of fuel the rate of hiring of taxies has increased considerably and they are asked to pay more than the prescribed limit. He has therefore requested the Government to raise limit to Rs. 1300-00 per day in respect of Non A.C. vehicles & Rs. 1800-00 per day in respect of A.C. vehicles.

The proposal has been examined. On account of increases in the cost of fuel, Government has considered it necessary to raise the limit of hiring of taxies for local conveyance in Bangalore and other places and extend the facility of permitting hiring of vehicles for the purpose of official duty while on official tour outside the state at places mentioned in Government Order dated 16.9.2000 in respect of all officers entitled for official vehicle and hence this Order.

**Government Order No. FD 01 BEM 2006, Bangalore, Dated: 9th November 2006**

1. All Officers who are entitled for official vehicle may hire taxies for local conveyance in cities of Bangalore, Delhi, Mumbai, Kolkatta and Chennai subject to a limit of Rs. 1000-00 per day. In respect of visit to the other state capitals they may hire taxies for local conveyance subject to limit of Rs. 800-00 per day.
2. The expenditure on this account shall be met out of the provision made for general expenses of the office.

By Order and in the name of the Governor of Karnataka,
**DARPAN JAIN**
Deputy Secretary to Government (B&R),
Finance Department.

P.R. 1633

## HEALTH & FAMILY WELFARE SECRETARIAT

**Sub :** Strengthening of the Para Medical Course - Rules, Syllabus, xamination Pattern and Course wise Infrastructure

**Read :** 1) Government in its letter No. HFW 181 MSF 03 Dt. 19.11.03 has directed the Para Medical Board to submit the draft rules including course wise syllabus, examination pattern and infrastructure for strengthening of Paa Medical Courses after conducting subject experts workshop
2) The Director of Medical Education and Chairman, Para Medical Board in their letter No. PMB/38/03-04 Dt. 1.9.05 has stated that the subject experts workshop was conducted on 11th and 12th March 2004 and experts have finalised the Rules, Syllabus, Examination Pattern and Infrastructure and furnished the report.
3) The subject experts report has been placed before the Board in its meeting held on 15.10.04 and the Board has approved the volume comprising Rules, Syllabus, Examination Pattern and Infrastructure and resolved to submit the same to the Govt. for approval and issue orders.

**Preamble:**

The Director of Medical Education and Chairman, Para Medical Board, Bangalore in his letter Dt. 1.9.05 has stated that the rules etc., are required to conduct and control the existing Para Medical Course in a systematic manner and thus requested to Govt. to approve the volume comprising of Rules, Course wise Syllabus, Examination Pattern and Infrastructure. Therefore this order.

**G.O. No. HFW 328 MSF 2006, Bangalore, Dated: 10th November 2006**

Government after careful examination of the proposals submitted by Director of Medical Education are pleased to issue the orders duly approving the volume comprising the Para Medical Board Rules, Course wise Syllabus, Examination Pattern and Infrastructure and will come into force from 2006-07 academic year attached to this Government order.

Further, the Para Medical Board is empowered to update syllabus, infrastructure from time to time for betterment of Para Medical Courses.

By Order and in the name of the Governor of Karnataka,
**MAAZ AHMED SHARIFF**
Under Secretary to Government,
Health & Family Welfare Dept. (Medical Education)

P.R. 1634

**ಸಹಕಾರ ಸಚಿವಾಲಯ**

**ವಿಷಯ :** ಕೃಷಿ ಮಾರಾಟ ಇಲಾಖೆಯ ಯೋಜನಾ ವಿಭಾಗದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ:ಸಮಾತೂ/252/ಮಾಇಸೇ/93 ದಿನಾಂಕ:23/06/2000
2) ಸರ್ಕಾರದ ಆದೇಶ ಸಂಖ್ಯೆ:ಸಇ/263/ಮಾಇಸೇ/2005 ದಿನಾಂಕ:13/02/2006
3) ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ:ಕೃಮಾಇ/126/ಸಿಬ್ಬಂದಿ-1(ಸಿ)05 ದಿನಾಂಕ: 14/8/2006

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಯೋಜನಾ ವಿಭಾಗಕ್ಕೆ ಒಟ್ಟು 11 ಹುದ್ದೆಗಳನ್ನು ಸೃಷ್ಟಿಸಿ ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ ಮೇಲೆ ಓದಲಾದ (2) ರಲ್ಲಿನ ದಿನಾಂಕ:13.2.2006ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ:30.6.2006 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿರುತ್ತದೆ. ಸದರಿ ಹುದ್ದೆಗಳನ್ನು ದಿನಾಂಕ:1.7.2006 ರಿಂದ ಖಾಯಂಗೊಳಿಸಲು ಅಥವಾ ಮುಂದಿನ 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಆಯುಕ್ತರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 298 ಮಾಇಸೇ 2006, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಕೃಷಿ ಮಾರಾಟ ಇಲಾಖೆಯ ಯೋಜನಾ ವಿಭಾಗಕ್ಕೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ:1.7.2006 ರಿಂದ 30.6.2007 ರವರೆವಿಗೆ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

| ಕ್ರ. ಸಂ. | ಹುದ್ದೆಗಳ ಹೆಸರು | ವೇತನ ಶ್ರೇಣಿ | ಸಂಖ್ಯೆ |
|---|---|---|---|
| 1 | ಜಂಟಿ ನಿರ್ದೇಶಕರು | 10620-14960 | 1 |
| 2 | ಅಧೀಕ್ಷಕರು | 5200-9580 | 1 |
| 3 | ಶೀಘ್ರಲಿಪಿಗಾರರು | 3850-7050 | 1 |
| 4 | ಪ್ರಥಮ ದರ್ಜೆ ಸಹಾಯಕರು | 3850-7050 | 2 |
| 5 | ದ್ವಿತೀಯ ದರ್ಜೆ ಸಹಾಯಕರು | 3000-5450 | 2 |
| 6 | ಬೆರಳಚ್ಚುಗಾರರು | 3000-5450 | 1 |
| 7 | ವಾಹನ ಚಾಲಕ | 3000-5450 | 1 |
| 8 | ಸಿಪಾಯಿ | 2500-3850 | 2 |
| | **ಒಟ್ಟು** | | **11** |

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ:"3475-ಇತರೆ-ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ)"ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಇ/382/ಅಂಆಸ(ಎ)/2006 ದಿನಾಂಕ: 29.9.2006 ಮತ್ತು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/01/ಟಿಎಫ್‌ಟಿ/96 ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಸಾಂಬಶಿವಂ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 1635

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ನಾಗಮಂಗಲದ ಕುಶಲಕರ್ಮಿ ತರಬೇತಿ ಸಂಸ್ಥೆಯ ಆವರಣದಲ್ಲಿ ಪಟ್ಟಣ ಪಂಚಾಯಿತಿ, ನಾಗಮಂಗಲ ಇವರು ಸುಲಭ್ ಶೌಚಾಲಯ ನಿರ್ಮಾಣಕ್ಕಾಗಿ ಕೋರಿರುವ ಸ್ಥಳವನ್ನು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :**
1) ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ: ಜಿಕೈಕೇ/ಕುಕತಸಂ/ಅಧೀ/ಮಂಡ್ಯ/2005-06 ದಿನಾಂಕ: 19.9.2006.
2) ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ: ಜಿಕೈಕೇ/ಕುಕತಸಂ/ಅಧೀ/ಮಂಡ್ಯ/2005-06 ದಿನಾಂಕ: 21.10.2006.

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2)ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರದಲ್ಲಿ ನಾಗಮಂಗಲದ ಕುಶಲಕರ್ಮಿ ತರಬೇತಿ ಸಂಸ್ಥೆಯ ಆವರಣದಲ್ಲಿ ಸುಲಭ್ ಶೌಚಾಲಯವನ್ನು ನಿರ್ಮಿಸುವುದರ ಸಂಬಂಧ ಅವಶ್ಯವಿರುವ ಕನಿಷ್ಠ ಭಾಗವನ್ನು ಗುರುತಿಸಿದ್ದು, ತತ್ಸಂಬಂಧ ಪಟ್ಟಣ ಪಂಚಾಯಿತಿ, ನಾಗಮಂಗಲ ಇವರು ನಕಾಶೆಯನ್ನು ಸಿದ್ದಪಡಿಸಿದ್ದು, ಈ ಬಗ್ಗೆ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಮಂಡ್ಯ ಇವರು ಕೈಗಾರಿಕಾಭಿವೃದ್ಧಿ ಆಯುಕ್ತರನ್ನು ಕೋರಿದ್ದು, ಆಯುಕ್ತರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ನಾಗಮಂಗಲದ ಕುಶಲಕರ್ಮಿ ತರಬೇತಿ ಸಂಸ್ಥೆಯ ಆವರಣದಲ್ಲಿ ಸುಮಾರು 388.62 ಚದರ ಅಡಿ ಜಾಗವನ್ನು ಸುಲಭ್ ಶೌಚಾಲಯ ನಿರ್ಮಿಸಲು ಅನುವಾಗುವಂತೆ ನಾಗಮಂಗಲ ಪಟ್ಟಣ ಪಂಚಾಯಿತಿಗೆ ಹಸ್ತಾಂತರಿಸಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 28 ಕೈಯೋವಿ 2006, ದಿನಾಂಕ: 14ನೇ ನವೆಂಬರ್ 2006**

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆಯ ನಾಗಮಂಗಲ ಕುಶಲಕರ್ಮಿ ತರಬೇತಿ ಸಂಸ್ಥೆಯ ಆವರಣದಲ್ಲಿ 388.62 ಚದರ ಅಡಿ ಸ್ಥಳವನ್ನು ಸುಲಭ್ ಶೌಚಾಲಯ ನಿರ್ಮಿಸಲು ಅನುವಾಗುವಂತೆ ನಾಗಮಂಗಲ ಪಟ್ಟಣ ಪಂಚಾಯಿತಿ ಇವರಿಗೆ ಇಂದಿನ ಮಾರುಕಟ್ಟೆ ಬೆಲೆಗೆ ಅನುಗುಣವಾದ ಮೊತ್ತವನ್ನು ಪಟ್ಟಣ ಪಂಚಾಯಿತಿಯವರು ಕೈಗಾರಿಕಾ ಇಲಾಖೆಗೆ ಭರಿಸುವ ಷರತ್ತಿಗೊಳಪಟ್ಟು ಹಸ್ತಾಂತರಿಸಲು ಸರ್ಕಾರ ಅನುಮೋದನೆ ನೀಡಿದೆ. ಸದರಿ ಜಾಗವನ್ನು ನಾಗಮಂಗಲ ಪಟ್ಟಣ ಪಂಚಾಯಿತಿಗೆ ಹಸ್ತಾಂತರಿಸುವ ಬಗ್ಗೆ ಕೈಗಾರಿಕಾಭಿವೃದ್ಧಿ ಆಯುಕ್ತರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಅಗತ್ಯ ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ವಾಸನ್**

ಪಿ.ಆರ್. 1637

ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು).

## ಶಿಕ್ಷಣ ಸಚಿವಾಲಯ

**ವಿಷಯ :** 12ನೇ ಹಣಕಾಸು ಆಯೋಗದ ಸಹಾಯದಿಂದ ರಾಜ್ಯ ವೃತ್ತಿ ಶಿಕ್ಷಣ ಇಲಾಖೆಗೆ ಮಲ್ಲೇಶ್ವರಂ ನಲ್ಲಿರುವ ಪದವಿ ಪೂರ್ವ ಶಿಕ್ಷಣ ಮಂಡಳಿ ಕಟ್ಟಡದಲ್ಲಿನ ಮೂರನೆ ಮಹಡಿಯಲ್ಲಿ ಕಟ್ಟಡ ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ ಹಾಗೂ ಅಂದಾಜಿಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ:ಡಿ.ಪಿ.ಎ.ಆರ್ 101 ಕೆ.ಟಿ.ಪಿ. 2005 ದಿನಾಂಕ:5.9.2006.
2) ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ರವರ ಪತ್ರ ಸಂಖ್ಯೆ:ಸಂಕದ:ಕನಿಶಾ: ಎಇ-5:2006-07 ದಿನಾಂಕ:26.10.2006.
3) ನಿರ್ದೇಶಕರು ವೃತ್ತಿ ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ:ಡಿವಿಇ ಆವಿ1.(ನಿಆಶಾ.ಇತರೆ.4/05-06 ದಿನಾಂಕ: 27.10.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 12ನೇ ಹಣಕಾಸು ಆಯೋಗದ ಸಹಾಯದಿಂದ ರಾಜ್ಯ ವೃತ್ತಿ ಶಿಕ್ಷಣ ಸಂಸ್ಥೆಗೆ ಮಲ್ಲೇಶ್ವರಂನಲ್ಲಿರುವ ಪದವಿ ಪೂರ್ವ ಶಿಕ್ಷಣ ಮಂಡಳಿ ಕಟ್ಟಡದಲ್ಲಿನ ಮೂರನೆ ಮಹಡಿಯಲ್ಲಿ ಸ್ಟೇಟ್ ಇನ್ಸ್‌ಟಿಟ್ಯೂಟ್ ಆಫ್ ವೋಕೇಶನಲ್ ಎಜುಕೇಷನ್ (ಎಸ್.ಇ.ವಿ.ಇ) ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಿಸಲು ರೂ.200 ಲಕ್ಷಗಳ (ರೂಪಾಯಿ ಇನ್ನೂರು ಲಕ್ಷಗಳು) ಸಹಾಯ ಧನ ಮಂಜೂರಾಗಿರುತ್ತದೆ. ಮೇಲೆ (2)ರಲ್ಲಿ ಓದಲಾದ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು. ಇವರು ಕಟ್ಟಡ ನಿರ್ಮಾಣದ ಅಂದಾಜು ಪಟ್ಟಿಯನ್ನು ತಯಾರಿಸಿ ಆಡಳಿತಾತ್ಮಕ ಮಂಜೂರಾತಿ ಹಾಗೂ ಅನುಮೋದನೆಯನ್ನು ನೀಡುವಂತೆ ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆರವರನ್ನು ಕೋರಿರುತ್ತಾರೆ. ಮೇಲೆ (3)ರ ಓದಲಾದ ದಿನಾಂಕ: 27.10.2006ರ ಪತ್ರದಲ್ಲಿ ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆರವರು 12ನೇ ಹಣಕಾಸು ಆಯೋಗದ ಸಹಾಯದಿಂದ ರಾಜ್ಯ ವೃತ್ತಿ ಶಿಕ್ಷಣ ಸಂಸ್ಥೆಗೆ ಪದವಿ ಪೂರ್ವ ಶಿಕ್ಷಣ, ಮಲ್ಲೇಶ್ವರಂ ನಲ್ಲಿರುವ ಪದವಿ ಪೂರ್ವ ಶಿಕ್ಷಣ ಮಂಡಳಿ ಕಟ್ಟಡದಲ್ಲಿನ ಮೂರನೆ ಮಹಡಿಯಲ್ಲಿ ಸ್ಟೇಟ್ ಇನ್ಸ್‌ಟಿಟ್ಯೂಟ್ ಆಫ್ ವೋಕೇಶನಲ್ ಎಜುಕೇನ್ (ಎಸ್.ಐ.ವಿ.ಇ) ತರಬೇತಿ ಕಟ್ಟಡ ನಿರ್ಮಿಸಲು ರೂ. 200 (ರೂಪಾಯಿ ಇನ್ನೂರು ಲಕ್ಷಗಳು) ಅಂದಾಜು ಪೆಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ಹಾಗೂ ಅನುಮೋದನೆಯನ್ನು ನೀಡಬೇಕೆಂದು ಕೋರಿರುತ್ತಾರೆ.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಗಣಿಸಿ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 287 ಯೋಯೊಕ 2006, ಬೆಂಗಳೂರು, ದಿನಾಂಕ: 4ನೇ ನವೆಂಬರ್ 2006**
**ಇಡಿ 98 ಸ್ಪೀಮರ (ಯೋನಿಕ್) 2006 ಬೆಂಗಳೂರು, ದಿನಾಂಕ: 4ನೇ ನವೆಂಬರ್ 2006**

ರಾಜ್ಯ ವೃತ್ತಿ ಶಿಕ್ಷಣ ಇಲಾಖೆಗೆ ಮಲ್ಲೇಶ್ವರಂನಲ್ಲಿರುವ ಪದವಿ ಪೂರ್ವ ಮಂಡಳಿ ಕಟ್ಟಡದಲ್ಲಿನ ಮೂರನೆ ಮಹಡಿಯಲ್ಲಿ ಇರುವ ಸ್ಟೇಟ್ ಇನ್ಸ್‌ಟಿಟ್ಯೂಟ್ ಆಫ್ ವೋಕೇಶನಲ್ ಎಜುಕೇಷನ್ (ಎಸ್.ಐ.ವಿ.ಇ.) ಕಟ್ಟಡ ನಿರ್ಮಿಸಲು 12ನೇ ಹಣಕಾಸು ಆಯೋಗವು ಮಂಜೂರು ಮಾಡಿರುವ ರೂ. 200 (ಎರಡು ನೂರು ಲಕ್ಷಗಳು ಮಾತ್ರ) ಲಕ್ಷಗಳು ಲೋಕೋಪಯೋಗಿ ಇಲಾಖೆಯವರು ನೀಡಿರುವ ಅಂದಾಜು ಪೆಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಈ ಕೆಳಕಂಡ ಷರತ್ತನ್ನು ವಿಧಿಸಿ ನಿರ್ದೇಶಕರು ವೃತ್ತಿ ಶಿಕ್ಷಣ ಇಲಾಖೆ ಬೆಂಗಳೂರು ಇವರಿಗೆ ಸರ್ಕಾರವು ಅನುಮತಿ ನೀಡಿದೆ.

1. ಖರೀದಿಗೆ ಸಂಬಂಧಿಸಿದಂತೆ ಎಲ್ಲಾ ವಿಷಯಗಳ ಬಗ್ಗೆ ಕೆ.ಟಿ.ಪಿ. ಕಾಯಿದೆ ಪ್ರಕಾರ ಕ್ರಮ ಕೈಗೊಳ್ಳತಕ್ಕದ್ದು.
2. ಸದರಿ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಯವರ ಮೂಲಕ ಕೈಗೊಳ್ಳತಕ್ಕದ್ದು.
3. ಪ್ರತಿ ಮಾಹೆಯ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೆ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣ ಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯಂತೆ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಶಿಕ್ಷಣ ಇಲಾಖೆ ಅವರ ಅ.ಟಿ. ಸಂಖ್ಯೆ:1011 ಐಎಫ್ (ಬಿ ಮತ್ತು ಎ) 2006 ದಿನಾಂಕ: 27.10.2006ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1638

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಎಸ್. ವೆಂಕಟರಾಮು, 3ನೇ ಅಪರ ಸರ್ಕಾರಿ ಅಭಿಯೋಜಕರು, ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಲಾ 15 ಪಿಪಿಇ 99, ದಿನಾಂಕ:11.2.99.
2) ಸರ್ಕಾರದ ಆದೇಶ ಸಂಖ್ಯೆ: ಲಾ 15 ಪಿಪಿಇ 99, ದಿನಾಂಕ:21.6.2000.
3) ಶ್ರೀ ಎಂ.ಎಸ್. ವೆಂಕಟರಾಮು, 3ನೇ ಅಪರ ಸರ್ಕಾರಿ ಅಭಿಯೋಜಕರು, ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇವರ ಪತ್ರ ದಿನಾಂಕ 3.7.2006.
4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್ / ಸಿಶಾ-1 / 133 / 99-2000, ದಿನಾಂಕ: 17.7.2006 ಮತ್ತು ದಿನಾಂಕ 24.8.2006.

**ಪ್ರಸ್ತಾವನೆ:**

ಶ್ರೀ ಎಂ.ಎಸ್. ವೆಂಕಟರಾಮು, 3ನೇ ಸರ್ಕಾರಿ ಅಭಿಯೋಜಕರು, ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಅವರು ಈ ಹಿಂದೆ ಮಡಿಕೇರಿ ಸಿ.ಜೆ.ಎಂ. ನ್ಯಾಯಾಲಯದಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ನಾಟಕ ಲೋಕಾಯುಕ್ತದಲ್ಲಿ ಲಂಚ ಆರೋಪದ ಪ್ರಕರಣ (ಪ್ರಕರಣ ಸಂಖ್ಯೆ: 6/2000) ದಾಖಲಾಗಿದ್ದರಿಂದ ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಅಮಾನತ್ತಿನಲ್ಲಿ ಇಡಲಾಗಿತ್ತು.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ, ಇದರ ಅಮಾನತ್ತನ್ನು ರದ್ದುಪಡಿಸಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಕೇಂದ್ರ ಕಛೇರಿ ಬೆಂಗಳೂರು ಇಲ್ಲಿನ ಸಹಾಯಕ ಸಭಿಯೋಗ ನಿರ್ದೇಶಕರ ಹುದ್ದೆಗೆ ವರ್ಗಾವಣೆ ಮೂಲಕ ಸೇವೆಗೆ ಪುನರ್ ನೇಮಿಸಲಾಗಿತ್ತು. ಸದರಿ ಅಧಿಕಾರಿಯವರು ಸದರಿ ಹುದ್ದೆಯ ಪ್ರಭಾರವನ್ನು ದಿನಾಂಕ:30.6.2000 (ಮಧ್ಯಾಹ್ನ) ದಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಶ್ರೀ ಎಂ.ಎಸ್. ವೆಂಕಟರಾಮು, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರ ಮೇಲೆ ಮಡಿಕೇರಿ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣ ಸಂಖ್ಯೆ: 6/2000 ದಾಖಲಾಗಿದ್ದು, ನ್ಯಾಯಾಲಯವು ಇವರನ್ನು ಆರೋಪದಿಂದ ಮುಕ್ತಗೊಳಿಸಿ ತಿರ್ಪನ್ನು ನೀಡಿರುತ್ತದೆ.

ಮೇಲೆ ಓಲಾದ (4)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಶ್ರೀ ಎಂ.ಎಸ್. ವೆಂಕಟರಾಮು ಇವರಿಗೆ ದಿನಾಂಕ:24.2.99 ರಿಂದ 30.6.2000ರ ವರೆಗಿನ ಅಮಾನತ್ತಿನಲ್ಲಿದ್ದ ಅವಧಿಯನ್ನು ಕೆ.ಸಿ.ಎಸ್.ಆರ್ಸ್ ನಿಯಮ 100(1)(ಬಿ) ರ ಅನುಸಾರ ವೇತನ ಮತ್ತು ಭತ್ಯಗಳನ್ನು ಸಂದಾಯ ಮಾಡುವ ಬಗ್ಗೆ ಮೇಲಿನ ನಿಲಂಬನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಘೋಷಿಸಿ ಸಕ್ರಮಗೊಳಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 335 ಪಿಪಿಇ 2006, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಶ್ರೀ ಎಂ.ಎಸ್. ವೆಂಕಟರಾಮು, 3ನೇ ಅಪರ ಸರ್ಕಾರಿ ಅಭಿಯೋಜಕರು, ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇವರ ದಿನಾಂಕ:24.2.1999 ರಿಂದ 30.6.2000ರವರೆಗಿನ ಅಮಾನತ್ತಿನ ಅವಧಿಯನ್ನು (ಎರಡೂ ದಿನಗಳು ಸೇರಿ) 1957ರ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100 (1)(ಬಿ) ರನ್ವಯ ಎಲ್ಲಾ ಉದ್ದೇಶಗಳಿಗೂ ಕರ್ತವ್ಯದ ಅವಧಿ ಎಂಬುದಾಗಿ ಪರಿಗಣಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ನಿಸಾರ್ ಅಹಮದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

ಪಿ.ಆರ್. 1640

## ವಸತಿ ಸಚಿವಾಲಯ

**ವಿಷಯ :** ವಾಂಬೆ ಯೋಜನೆಯಡಿ ಮನೆಗಳ ನಿರ್ಮಾಣದ ಘಟಕ ವೆಚ್ಚವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1) ಆಯುಕ್ತರು, ಕಕೊನಿಮರವರ ಅ.ಸ.ಪತ್ರ ಸಂಖ್ಯೆ:ಕಕೊನಿಮ/ಆಯುಕ್ತರು/ತಾಂನಿ/ವಾಂಬೆ/2006-07, ದಿನಾಂಕ: 7.8.2006.
2) ಆರ್ಥಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇತೃತ್ವದಲ್ಲಿ ದಿನಾಂಕ 11.10.2006 ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ 1 ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿರವರು ಸರ್ಕಾರಕ್ಕೆ ಪತ್ರ ಬರೆದು ವಾಂಬೆ ಯೋಜನೆ ಹಂತ-2 ಮತ್ತು 3ರಲ್ಲಿ ಕೇಂದ್ರ ಸರ್ಕಾರವು ಈಗಾಗಲೇ ಬಿಡುಗಡೆ ಮಾಡಿರುವ ಒಟ್ಟು 8280 ಮನೆಗಳ ನಿರ್ಮಾಣ ಮಾಡಬೇಕಾಗಿದ್ದು, ಈಗ ಚಾಲ್ತಿಯಲ್ಲಿರುವ ಘಟಕ ವೆಚ್ಚ ರೂ.60,000/- (ಬೆಂಗಳೂರು ನಗರ) ಮತ್ತು ರೂ.40,000/- (ಇತರೆ ನಗರ/ಪಟ್ಟಣಗಳು) ಇದ್ದು, ಈ ಮೊತ್ತದಲ್ಲಿ ಮನೆಗಳ ನಿರ್ಮಾಣ ಸಾಧ್ಯವಾಗುವುದಿಲ್ಲವೆಂದು ತಿಳಿಸಿರುತ್ತಾರೆ. ಅಲ್ಲದೆ ಹಂತ 4ರಲ್ಲಿ 3052 ವಾಂಬೆ ಮನೆಗಳು, ಹಂತ-5 ರಲ್ಲಿ 3455 ಮನೆಗಳು ಹಾಗೂ ಹಂತ-6 ರಲ್ಲಿ 23,000 ಮನೆಗಳಿಗೆ ಕೇಂದ್ರ ಸರ್ಕಾರ ತಾತ್ವಿಕ ಒಪ್ಪಿಗೆ ನೀಡಿದ್ದು, ಈ ಮನೆಗಳ ನಿರ್ಮಾಣಕ್ಕೂ ಘಟಕ ವೆಚ್ಚವನ್ನು ಹೆಚ್ಚಿಸುವುದು ಅತಿ ಅವಶ್ಯಕವಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಸದರಿ ಮನೆಗಳ ನಿರ್ಮಾಣದಲ್ಲಿ ಷೆಡ್ಯೂಲ್ ದರಗಳು ಶೇ.55 ರಷ್ಟು ಹೆಚ್ಚಾಗಿದ್ದು, ಸಾಮಗ್ರಿಗಳ ಬೆಲೆಯು ಮಾರುಕಟ್ಟೆಯಲ್ಲಿ ಹೆಚ್ಚಾಗಿರುತ್ತದೆ. ಸಾಮಗ್ರಿಗಳ ದರ ಹೆಚ್ಚಾದ ಕಾರಣ ಕೇಂದ್ರ ಸರ್ಕಾರವು ತನ್ನ ಹೊಸ ಯೋಜನೆ IHSDP/JNNURM ಅಡಿಯಲ್ಲಿ ಘಟಕ ವೆಚ್ಚವನ್ನು ರೂ.40 ಸಾವಿರಗಳಿಂದ 80 ಸಾವಿರಗಳಿಗೆ ಹಾಗೂ ರೂ.60 ಸಾವಿರಗಳಿಂದ 1,25,000 ಗಳಿಗೆ ಹೆಚ್ಚಿಸಿರುತ್ತದೆ. ಆದುದರಿಂದ ದಿನಾಂಕ: 5.8.2006 ರಂದು ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರ ನೇತೃತ್ವದಲ್ಲಿ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರ ಸಮ್ಮುಖದಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿದಂತೆ ಪ್ರತಿ ಘಟಕ ವೆಚ್ಚವನ್ನು ಬೆಂಗಳೂರು ನಗರ

ವ್ಯಾಪ್ತಿಯ ಪ್ರದೇಶದಲ್ಲಿ ರೂ.70,000 ಹಾಗೂ ಇತರೆ ನಗರ/ಪಟ್ಟಣ ಪ್ರದೇಶಗಳಲ್ಲಿ ನಿರ್ಮಿಸುವ ಪ್ರತಿ ಮನೆಯ ಘಟಕ ವೆಚ್ಚ ರೂ.50,000 ಗಳಿಗೆ ಹೆಚ್ಚಿಸಲು ಕೋರಿರುತ್ತಾರೆ. ಇದು ಸಾಧ್ಯವಾಗದಿದ್ದ ಪಕ್ಷದಲ್ಲಿ ಹೆಚ್ಚುವರಿ ವೆಚ್ಚವನ್ನು ಫಲಾನುಭವಿಗಳಿಂದ ಪ್ರಸ್ತುತ ನೀಡುತ್ತಿರುವ ವಂತಿಕೆ ಮೊತ್ತದಿಂದ (ಪ್ರಾರಂಭಿಕ ಠೇವಣಿ ಅಥವಾ ಅಸಲು ಹಾಗೂ ಬಡ್ಡಿ ಹಣದಿಂದ) ಪ್ರತಿ ಘಟಕ ವೆಚ್ಚ ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಬರುವ ಪ್ರದೇಶದಲ್ಲಿ ರೂ.30,000 ಹಾಗೂ ಇತರೆ ನಗರ/ಪಟ್ಟಣ ಪ್ರದೇಶಗಳಲ್ಲಿ ರೂ.20,000 ಗಳನ್ನು ಫಲಾನುಭವಿಗಳಿಂದ ವಸೂಲಾತಿ ಮಾಡುತ್ತಿದ್ದು, ಈ ಹಣದಲ್ಲಿ ಹೆಚ್ಚುವರಿ ಮೊತ್ತವನ್ನು ಪ್ರತಿ ಮನೆಗೆ ರೂ.10,000 ಗಳಂತೆ ಭರಿಸಲು ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ 2ರಲ್ಲಿ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 10.11.2006 ರಂದು ವಾಂಬೆ ಯೋಜನೆಯ ಮನೆಗಳ ಘಟಕ ವೆಚ್ಚವನ್ನು ಹೆಚ್ಚಿಸುವ ಬಗ್ಗೆ ಸಭೆ ನಡೆದು ಪ್ರತಿ ಮನೆಗೆ ರೂ.10,000 ದಂತೆ ಷರತ್ತುಗಳೊಂದಿಗೆ ಹೆಚ್ಚಿಸಲು ತೀರ್ಮಾನಿಸಿದೆ.

ಸರ್ಕಾರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 65 ಕೊಮಂಲೆ 2003, ಬೆಂಗಳೂರು, ದಿನಾಂಕ: 15ನೇ ನವೆಂಬರ್ 2006**

ವಾಂಬೆ ಯೋಜನೆಯಡಿ ಮನೆಗಳ ನಿರ್ಮಾಣದ ಘಟಕ ವೆಚ್ಚವನ್ನು ರೂಪಾಯಿ ಹತ್ತು ಸಾವಿರದಂತೆ ಈ ಕೆಳಕಂಡ ಷರತ್ತುಗಳಂತೆ ಹೆಚ್ಚಿಸಲಾಗಿದೆ.

(1) ಈ ಏರಿಕೆಯು 2005-06 ಮತ್ತು ನಂತರದಲ್ಲಿ ನಿರ್ಮಾಣ ಮಾಡುವ ಮನೆಗಳಿಗೆ ಅನ್ವಯವಾಗಲಿದೆ. ಈ ನಿಧಿಯು ಸಂಚಿತ ನಿಧಿಗೆ ಕೂಡಿಸಲ್ಪಟ್ಟಿರಬಾರದು (IV, V ಮತ್ತು VI ಹಂತಗಳಿಗೆ)

(2) ನಿರ್ಮಾಣ ವೆಚ್ಚವು ರೂ.10 ಸಾವಿರ ಒಳಗೆ ಗಣಿಸಲ್ಪಟ್ಟಿರಬಹುದಾದರೆ ಈ ಹಣವನ್ನು ಕೊಳಚೆ ನಿರ್ಮೂಲನಾ ಮಂಡಳಿ ಇಟ್ಟುಕೊಳ್ಳತಕ್ಕದ್ದಲ್ಲ. ಈ ಮೊದಲಿನ ಹಂತಗಳಲ್ಲಿನ ಕ್ರಮದಂತೆ ಅದನ್ನು ಸಂಚಿತ ನಿಧಿ ಸಾಲ ಮರುಪಾವತಿ ಎಂದು ಪಾವತಿಸತಕ್ಕದ್ದು.

(3) ನಿರ್ಮಾಣ ವೆಚ್ಚವನ್ನು ತಗ್ಗಿಸಬೇಕಾದುದರಿಂದ ಈ ನಿರ್ಮಾಣದ ಕೆಲಸಗಳನ್ನು ಫಲಾನುಭವಿಗಳ ಸಹಕಾರದಿಂದಲೇ ಪೂರೈಸಲು ಪ್ರಯತ್ನಿಸುವುದು.

(4) ಮಂಡಳಿಯಲ್ಲಿರುವ ಈ ಮೊದಲು ಹಿಂದಿನ ಹಂತಗಳಲ್ಲಿ ಫಲಾನುಭವಿಗಳಿಂದ ಪಡೆದ ರೂ.6.46 ಕೋಟಿ ಮೊತ್ತದ ಹಣವನ್ನು ಈ ಕೂಡಲೇ ಸಂಚಿತ ನಿಧಿಗೆ ಪಾವತಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಎಫ್‌ಡಿ/481/ವೆಚ್ಚ-9/2006 ದಿನಾಂಕ: 25.10.2006ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1641

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ.

## INFRASTRUCTURE DEVELOPMENT SECRETARIAT

**Sub :** Release of Funds to KSIIDC towards, SBI Guarantee to BIAL for Government of Karnataka' Commitment for State Support and Equity to the BIAP.

**Read :**
1) Letter No. AGM(BIAP)/1800/2005-06 dated 17.8.2005 of MD, KSIIDC
2) Letter No. AGM(BIAP)/2068/2006-07 dated 28.8.2006 of GM, KSIIDC.
3) G.O. No. IDD 81 DIA 2006 (i) dated 16.11.2006.

**Preamble:**

Managing Director, KSIIDC in his letter dated 17.8.2005 has stated that KSIIDC have procured guarantee from SBI in favour of BIAL for Government of Karnataka's commitment of State Support of Rs. 35.00 crores and undisbursed equity of Rs. 34.671 crores, issued on 22.6.2005 and 29.6.2005 respectively. Further it is stated that an up front guarantee fee of 0.6% of the guarantee amount i.e. Rs. 2,30,00,803/- (Rupees Two Crores Thirty lakhs Eight Hundred and Three only) has been paid by KSIIDC. Apart from this MD, KSIIDC has requested to consider payment of transaction facilitation charges of 1.5% to KSIIDC. Further the General Manager, KSIIDC in his letter dated 28.8.2006 read at Sl.No. (2) above has requested that release of Rs. 7.55 crores including transaction facilitation charges at 1.5% be made to KSIIDC as against Rs. 3.50 crores allocated in the current year budget under the Head BIAL-State Support to the Project 5465-01-190-2-02-100-Financial Assistance.

In G.O. dated 16.11.2006 read at Sl. No. (3) above Government have accorded sanction to adjust Rs.315.01 lakhs towards payment of Guarantee Commission for SBI Bank Guarantee under Head of Account 5465-01-190-2002 (P) BIAL State Support Project 100-Finance Assistance.

Further to release Rs.230.00 lakhs for front-end fee serviced by KSIIDC and Rs.3.00 lakhs for service charges, this following order is issued.

**Government Order No.IDD 81 DIA 2006(II), Bangalore, Dated: 16th November 2006.**

After careful examination of the above proposal Government have accorded sanction to release Rs.230.00 lakhs for front-end fees serviced by KSIIDC and Rs.3.00 lakhs for service charge to KSIIDC towards SBI Guarantee charges under the Head of Account 5465-01-190-2-02(P)-BIAL-State Support to Project-100-Finance Assistance.

2. This order is issued with the concurrence of the Finance Department in U.O. Note No. FD 1820 Exp-I/06 dated 21.10.2006.

3. The CMD, KSIIDC is authorized to draw this amount on a Payees Receipt countersigned by the Under Secretary to Government, Infrastructure Development Department.

By Order and in the name of the Governor of Karnataka,

**N. Manjula Geetha**

Under Secretary to Government,

Infrastructure Development Department.

P.R. 1642

**Sub :** Release of Funds to KSIIDC towards, SBI Guarantee to BIAL for Government of Karnataka' Commitment for State Support and Equity to the BIAP.

**Read :** 1) Letter No. AGM(BIAP)/1800/2005-06 dated 17.8.2005 of MD, KSIIDC

2) Letter No. AGM(BIAP)/2068/2006-07 dated 28.8.2006 of GM, KSIIDC.

**Preamble:**

Managing Director, KSIIDC in his letter dated 17.8.2005 has stated that KSIIDC have procured guarantee from SBI in favour of BIAL for Government of Karnataka's commitment of State Support of Rs. 350.00 crores and undisbursed equity of Rs. 34.671 crores, issued on 22.6.2005 and 29.6.2005 respectively. Further it is stated that an up front guarantee fee of 0.6% of the guarantee amount i.e. Rs. 2,30,00,803/- (Rupees Two Crores Thirty lakhs Eight Hundred and Three only) has been paid by KSIIDC. Apart from this MD, KSIIDC has requested to consider payment of transaction facilitation charges of 1.5% to KSIIDC. Further the General Manager, KSIIDC in his letter dated 28.8.2006 read at Sl.No. (2) above has requested that release of Rs. 7.55 crores including transaction faciitation charges at 1.5% be made to KSIIDC as against Rs. 3.50 crores allocated in the current year budget under the Head BIAL-State Support to the Project 5465-01-190-2-02-100-Financial Assistance. Government have examined the proposal and accordingly the following orders are issued.

**Government Order No.IDD 81 DIA 2006 (I), Bangalore, Dated: 16th November 2006.**

After careful examination of the proposal sanction is hereby Accorded to adjust Rs.315.01 lakhs towards payment of Guarantee Commission for SBI Bank Guarantee under the Head of Account 5465-01-190-2-02 (P) BIAL State Support to Project 100-Finance Assistance by per contra credit to 0075-00-108-0-01-Guarantee Fees. There will be no cash outgo in this regard.

2. The Accountant General (A&E) is requested to carryout necessary book adjustments in the accounts for the year 2006-07.

3. This order is issued with the concurrence of Finance Department in U.O. Note No FD 1820 Exp-I/06 dated 21.10.2006.

By Order and in the name of the Governor of Karnataka,

**N. Manjula Geetha**

Under Secretary to Government,

Infrastructure Development Department.

P.R. 1643

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಶ್ರೀ ಎ.ಎಸ್. ನಾಗರಾಜ್, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮೈಸೂರು ಅವರಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಅಧಿಕೃತ ಜ್ಞಾಪನ ಸಂಖ್ಯೆ: ಕಸನಿ 21 ಸಿಬ್ಬಂದಿ 2003-04 ದಿನಾಂಕ: 27.5.2004.

2) ಅಧಿಸೂಚನೆ ಸಂಖ್ಯೆ: ಸಂಕಇ 94 ಕಸನಿ 2004 ದಿನಾಂಕ: 24.12.2004.

3) ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರದ ಸಂಖ್ಯೆ:ಕಸನಿ/109/ಸಿಬ್ಬಂದಿ/2004-05 ದಿನಾಂಕ: 19.5.2006.

**ಪ್ರಸ್ತಾವನೆ :**

ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮೈಸೂರು ಇಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಡಿ. ನಾಗೇಂದ್ರಪ್ಪ ಅವರು 31.5.2004ರಂದು ವಯೋನಿವೃತ್ತಿ ಹೊಂದಿದ ಕಾರಣ ಮಂಡ್ಯದಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎ.ಎಸ್. ನಾಗರಾಜ್ ಅವರನ್ನು ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮೈಸೂರು ಈ ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರದಲ್ಲಿಟ್ಟು ಮೇಲೆ (1)ರಲ್ಲಿ ಓದಲಾದ ದಿನಾಂಕ: 27.5.2004ರ ಅಧಿಕೃತ ಜ್ಞಾಪನ ಹೊರಡಿಸಲಾಯಿತು. ಅದರಂತೆ 31.5.2004ರ ಅಪರಾಹ್ನ ಎ.ಎಸ್. ನಾಗರಾಜ್ ಅವರು ಹೆಚ್ಚುವರಿ ಪ್ರಭಾರ ವಹಿಸಿಕೊಂಡರು. ಅನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ: 24.12.2004ರ ಅಧಿಸೂಚನೆಯಲ್ಲಿ ಶ್ರೀ ಕೊಟ್ರಪ್ಪ ಅವರನ್ನು ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕತಿ ಇಲಾಖೆ ಈ ಹುದ್ದೆಗೆ ನೇಮಿಸಲಾಯಿತು. ಅದರಂತೆ 22.1.2005 ರಂದು ಎ.ಎಸ್. ನಾಗರಾಜ್ ಅವರು ಕೆ. ಕೊಟ್ರಪ್ಪ ಅವರಿಗೆ ಪ್ರಭಾರವನ್ನು ವಹಿಸಿಕೊಟ್ಟರು. 1.6.2004 ರಿಂದ 30.9.2004 ರವರೆಗೆ ಎ.ಎಸ್. ನಾಗರಾಜ್ ಅವರಿಗೆ ನಿರ್ದೇಶಕರ ಹಂತದಲ್ಲಿ ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲಾಗಿದ್ದು 1.10.2004 ರಿಂದ 22.1.2005ರವರೆಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವಂತೆ ನಿರ್ದೇಶಕರು ಮೇಲೆ (3)ರಲ್ಲಿ ಓದಲಾದ ದಿನಾಂಕ: 19.5.2006ರ ಪತ್ರದಲ್ಲಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 59 ಕಸನಿ 2006, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2006**

ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮೈಸೂರು ಈ ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರ ನಿರ್ವಹಿಸಿದ್ದಕ್ಕಾಗಿ ಶ್ರೀ ಎ.ಎಸ್. ನಾಗರಾಜ್, ಅಂದಿನ ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮಂಡ್ಯ ಅವರಿಗೆ 1.10.2004 ರಿಂದ 22.1.2005 ರವರೆಗೆ ಸದರಿ ಹುದ್ದೆಯ ವೇತನ ಶ್ರೇಣಿ 6000-11200ರಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, 68ನೇ ನಿಯಮದಂತೆ ಪ್ರಭಾರ ಭತ್ಯೆಯನ್ನು ಈ ಮೂಲಕ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ,

ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1644

**ವಿಷಯ :** ಚಿತ್ರದುರ್ಗದಲ್ಲಿ ಪರಂಪರಾ ಸಂಕೀರ್ಣದ (ವಸ್ತು ಸಂಗ್ರಹಾಲಯ) ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳುವ ಕುರಿತು.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 57 ಕೆಎಂಯು 2003 ದಿನಾಂಕ 20.3.2003.
2) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 42 ಸ್ವೀಮರ 2004 ದಿನಾಂಕ 15.5.2004.
3) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 36 ಕೆಎಂಯು 2005 ದಿನಾಂಕ 18.3.2005.
4 ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ: ಎಸಿಟಿ:1/35/2004-05 ದಿನಾಂಕ:22.12.2005.

**ಪ್ರಸ್ತಾವನೆ :**

ಚಿತ್ರದುರ್ಗದಲ್ಲಿ ಪರಂಪರಾ ಸಂಕೀರ್ಣದ (ವಸ್ತು ಸಂಗ್ರಹಾಲಯ) ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳುವ ಕುರಿತು ಮೇಲೆ (1) ರಿಂದ (3)ರವರೆಗೆ ಓದಲಾದ ಸರ್ಕಾರಿ ಆದೇಶಗಳಲ್ಲಿ ಒಟ್ಟು ರೂ.5,69,500/- ಗಳ ಅನುದಾನವನ್ನು ಬಿಡುಗಡೆ ಮಾಡಲಾಯಿತು. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ: 22.12.2005ರ ತಮ್ಮ ಪತ್ರದಲ್ಲಿ ಭೂಸ್ವಾಧೀನ ಕಾರ್ಯದಲ್ಲಿ ಪ್ರಕ್ರಿಯೆ ಮುಂದುವರಿಯುತ್ತಿದ್ದು ಇದರ ಸಲುವಾಗಿ ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ಪಡೆದು ಸಲ್ಲಿಸುವಂತೆ ಕಂದಾಯ ಇಲಾಖೆಯು ತಿಳಿಸಿದ್ದು ಆದರಂತೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 172 ಕೆಎಂಯು 2006, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2006**

ಚಿತ್ರದುರ್ಗದಲ್ಲಿ ಪರಂಪರಾ ಸಂಕೀರ್ಣದ (ವಸ್ತು ಸಂಗ್ರಹಾಲಯ) ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರಿಗೆ ಈ ಮೂಲಕ ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1645

**ವಿಷಯ :** ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಯೋಜನೆಗಳಿಗೆ 2006-07ನೇ ಸಾಲಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006 ದಿನಾಂಕ 7.4.2006.
2) ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ ಕಸನಿ:1:ಕಅ:2006-07 ದಿನಾಂಕ: 7.8.2006.

ಮೇಲೆ (1)ರಲ್ಲಿ ಓದಲಾದ ದಿನಾಂಕ: 7.4.2006ರ ಸರ್ಕಾರಿ ಆದೇಶದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯಚಟುವಟಿಕೆಗಳಿಗೆ 20 ಲಕ್ಷ ರೂಪಾಯಿಗಳ ಕ್ರಿಯಾ ಯೋಜನೆಯನ್ನು ಅನುಮೋದಿಸಲಾಗಿದೆ. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 7.8.2006ರ ತಮ್ಮ ಪತ್ರದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2006-07ನೇ ಸಾಲಿನ ಕಾರ್ಯಚಟುವಟಿಕೆಗಳಿಗಾಗಿ ರೂ.20.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 34 ಕೆಡಿಎಲ್ 2006, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2006**

2006-07ನೇ ಸಾಲಿನಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕ್ರಿಯಾ ಯೋಜನೆಗಳಿಗೆ, ಲೆಕ್ಕಶೀರ್ಷಿಕೆಯಲ್ಲಿ ಒದಗಿಸಿರುವ ಒಟ್ಟಾರೆ ಅನುದಾನವನ್ನು ಯಾವುದೇ ಕಾರಣಕ್ಕೂ ಮೀರಬಾರದೆಂಬ ಷರತ್ತಿಗೆ ಒಳಪಟ್ಟು, ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2006-07ನೇ ಸಾಲಿನ ಕಾರ್ಯಚಟುವಟಿಕೆಗಳಿಗೆ ರೂ.20.00 ಲಕ್ಷಗಳನ್ನು ಬಿಡುಗಡೆ ಮಾಡಲು ಈ ಮೂಲಕ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-102-4-01-100 (ಯೋಜನೆ) ಇದರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 867 ಐಎಫ್ (ಬಿಎ) 2006 ದಿನಾಂಕ:3.10.2006ರಲ್ಲಿ ನೀಡಿದ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1646

**ಸಹಕಾರ ಸಚಿವಾಲಯ**

**ವಿಷಯ:** ಮನೋನ್ಮಯಿ ಪತ್ತಿನ ಸಹಕಾರ ಸಂಘ ನಿ., ಬೆಂಗಳೂರು ಇದರ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕುಗಳ ವಿಭಾಗ) ಪತ್ರ ಸಂಖ್ಯೆ: ಯುಬಿಸಿ-1/ಎಸ್‌ಎಸ್‌ಎನ್/58/ 2006-07 ದಿನಾಂಕ: 08.08.2006.

**ಪ್ರಸ್ತಾವನೆ :**

ಮನೋನ್ಮಯಿ ಪತ್ತಿನ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಮಂಡಳಿ ಸ್ಥಾನದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1)ರ ಪ್ರಕಾರ ದಿನಾಂಕ: 05.02.2005 ರಂದು ವಿಶೇಷಾಧಿಕಾರಿಯನ್ನು ನೇಮಕಾತಿ ಮಾಡಿದ್ದು ಆ ನಂತರ ವಿಶೇಷಾಧಿಕಾರಿಯ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಲಾಗಿದ್ದು ವಿಶೇಷಾಧಿಕಾರಿಯ ಅವಧಿಯು ದಿನಾಂಕ: 3.08.2006 ರಂದು ಮುಕ್ತಾಯವಾಗಿರುತ್ತದೆ. ಸಂಘದ ಠೇವಣಿದಾರರೊಬ್ಬರು ಸಂಘದ ಹಿಂದಿನ ಅಧ್ಯಕ್ಷರಾದ ಶ್ರೀ ಗುರುರಾಜ್ ವಿರುದ್ಧ ದಾಖಲಿಸಿದ ಕ್ರಿಮಿನಲ್ ಮೊಕದ್ದಮೆಯಲ್ಲಿ ಪೋಲೀಸರು ಸಂಘದ ಎಲ್ಲಾ ದಾಖಲಾತಿಗಳನ್ನು ವಶಪಡಿಸಿಕೊಂಡಿದ್ದು, ನ್ಯಾಯಾಲಯದ ಆದೇಶದ ಮೇರೆಗೆ ಇತ್ತೀಚೆಗೆ ಸಂಘದ ದಾಖಲಾತಿಗಳನ್ನು ಸಂಘದ ವಶಕ್ಕೆ ಹಿಂತಿರುಗಿಸಿದ್ದು ಲೆಕ್ಕಪರಿಶೋಧನೆ ವಿಳಂಬವಾಗಿದ್ದು ಸಂಘದ ಸದಸ್ಯರ ಠೇವಣಿಯನ್ನು ಹಿಂತಿರುಗಿಸಲು ಸಂಘದಲ್ಲಿ ಬೇಡಿಕೆಗನುಗುಣವಾಗಿ ಹಣವಿಲ್ಲದಿರುವುದರಿಂದ ಪ್ರಕರಣ 70 ಅಡಿ ದಾವೆಗಳನ್ನು ಹೂಡಬೇಕಾಗಿದ್ದು, ಪ್ರಕರಣ 64ರ ವಿಚಾರಣೆಗೆ ಆದೇಶಿಸಿದ್ದು ಇತ್ಯಾದಿ ಸಂಘದಲ್ಲಿ ನಿರ್ವಹಿಸಬೇಕಾದ ಇನ್ನು ಅತಿ ಮುಖ್ಯವಾದ ಕೆಲಸಗಳು ಬಾಕಿ ಇರುವುದರಿಂದ ಸಂಘದ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ: 4.08.2006 ರಿಂದ ಆರು ತಿಂಗಳವರೆಗೆ ಮುಂದುವರೆಸಲು ಪ್ರಕರಣ 121 ರಡಿ ವಿನಾಯಿತಿ ನೀಡಿ ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ಕೋರಿದ್ದಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 172 ಸಿಎಲ್‌ಎಮ್ 2006, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ, ಮನೋನ್ಮಯಿ ಪತ್ತಿನ ಸಹಕಾರ ಸಂಘ ನಿ., ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ;

**'31ರ ಪ್ರಕರಣದಲ್ಲಿ,**

(1)ನೇ ಉಪ ಪ್ರಕರಣದಲ್ಲಿರುವ 'ಒಂದು ವರ್ಷ' ಎಂಬ ಪದಗಳಿಗೆ ಬದಲಾಗಿ 'ಹದಿನೆಂಟು ತಿಂಗಳು' ಎಂಬುದಾಗಿ ಪ್ರತಿಯೋಜಿಸತಕ್ಕದ್ದು

**ಸೂಚನೆ:** ಪ್ರಕರಣ31 (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:03.02.2007 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣದ 31(1) ರ ಉಪಬಂಧಗಳು ಪುನ:ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1394

ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 39ಎ (4) ರನ್ವಯ ದಿನಾಂಕ: 30.09.2006 ರೊಳಗೆ ನಡೆಸಬೇಕಿರುವ ಹಳಿಯಾಳ ಪಟ್ಟಣ ಸಹಕಾರಿ ಬ್ಯಾಂಕಿನ ಆಡಳಿತ ಸಮಿತಿಯ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ: ಸಿಎಂಡಬ್ಲ್ಯೂ 77 ಸಿಎಲ್‌ಎಂ 2006 ದಿ:7.04.2006.
2. ಮಾಜಿ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ವಿ.ಡಿ.ಹೆಗ್ಗಡೆ ರವರ ಪತ್ರ ಸಂ:ಸಿಎಂ/3310/ಎಸ್‌ಐಪಿ/06 ದಿ:26.08.2006.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಯುಬಿಸಿ/1/225/ಅಮರ/2005-06 ದಿನಾಂಕ: 30.08.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದ ಪ್ರಕಾರ ಕರ್ನಾಟಕ ಸರ್ಕಾರವು ಸದರಿ ಬ್ಯಾಂಕಿನ ಆಡಳಿತ ಸಮಿತಿಯ ಚುನಾವಣೆಯನ್ನು ದಿ:30.9.2006 ರವರೆಗೆ ಮುಂದೂಡಿರುತ್ತದೆ. ಮೇಲೆ ಓದಲಾದ (2)ರಪತ್ರದಲ್ಲಿ ಹಳಿಯಾಳ ಅರ್ಬನ್ ಸಹಕಾರಿ ಬ್ಯಾಂಕಿನಲ್ಲಿ ಸಂಸ್ಥೆಯ ಸುಧಾರಣೆ ಹಾಗೂ ಸಾಲಗಾರರಿಗೆ ಸಮಯದ ಅವಕಾಶಕ್ಕಾಗಿ ಏಕಕಾಲಿಕ ಸಾಲ ತೀರುವಳಿ ಯೋಜನೆಯ ಅನುಷ್ಠಾನದಿಂದ ಏಕಗಂಟಿನಲ್ಲಿ ಸಾಲ ಮರುಪಾವತಿ ಮಾಡುವ ಅನುಕೂಲ ಮಾಡಿಕೊಟ್ಟಿದ್ದು, ಇದು ಕೇವಲ 45 ದಿನ ಅವಕಾಶ ಸಿಕ್ಕಿದ್ದು ಇದರ ಪೂರ್ಣ ಉಪಯೋಗ ಪಡೆಯಲು ಇನ್ನೂ ಕೆಲವು ತಿಂಗಳು ಸಮಯವಕಾಶ ಅವಶ್ಯಕತೆ ಇರುತ್ತದೆ ಎಂದು ತಿಳಿಸಿ ಮಾರ್ಚಿ ತಿಂಗಳಲ್ಲಿ ಹೊಸಬೆಳೆ ಕೈಗೆ ಬಂದಾಗ ಸಾಲ ಮರುಪಾವತಿ ಶೇ 75 ಕ್ಕೂ ಮಿಕ್ಕ ವಸೂಲಾತಿ ಸಾಧ್ಯವಾಗಬಹುದೆಂದೂ, ಸಿಬ್ಬಂದಿಗಳಿಗೆ ಕಾರ್ಯ ಅನುಷ್ಠಾನಕ್ಕೆ ಸಮಯ ನೀಡಬೇಕಾಗಿರುವ ಕಾರಣದಿಂದ ಹಾಗೂ ಸದರಿ ಸಂಸ್ಥೆಯ ಉಳಿವಿಗೆ ಮತ್ತು ಸಾಲಗಾರರಿಗೆ ನೆರವಾಗುವ ದೃಷ್ಟಿಯಿಂದ ಆಡಳಿತಗಾರರ ಅವಧಿಯನ್ನು ಮುಂದುವರಿಸಲೇಬೇಕೆಂದೂ ಮಾಜಿ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ವಿ.ಡಿ ಹೆಗ್ಗಡೆರವರು ಪತ್ರದಲ್ಲಿ ಕೋರಿರುತ್ತಾರೆ. ಮೇಲೆ ಓದಲಾದ (3)ರ ಪತ್ರದಲ್ಲಿ ಸದರಿ ಬ್ಯಾಂಕಿನ ಹಿತದೃಷ್ಟಿಯಿಂದ ಆಡಳಿತ ಸಮಿತಿಯ ಚುನಾವಣೆಯನ್ನು ದಿನಾಂಕ: 31.12.2006ರವರೆಗೆ ಮುಂದೂಡುವಂತೆ ಶಿಫಾರಸ್ಸು ಮಾಡಿದ್ದಾರೆ.

ಈ ಎಲ್ಲಾ ಕಾರಣಗಳಿಂದ ಸದರಿ ಸಂಸ್ಥೆಯ ಸದಸ್ಯರ ದೃಷ್ಟಿಯಿಂದ ದಿನಾಂಕ: 30.9.2006 ರೊಳಗೆ ನಡೆಸಬೇಕಿರುವ ಆಡಳಿತ ಸಮಿತಿಯ ಚುನಾವಣೆಯನ್ನು ಮುಂದೂಡಿ ದಿನಾಂಕ: 31.12.2006 ರ ಒಳಗಾಗಿ ನಡೆಸಲು ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 180 ಸಿಎಲ್‌ಎಮ್ 2006, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ಮತ್ತು 39ಎ (4) ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ದಿನಾಂಕ: 30–09–2006 ರೊಳಗೆ ನಡೆಸಬೇಕಿರುವ ಹಳಿಯಾಳ ಪಟ್ಟಣ ಸಹಕಾರಿ ಬ್ಯಾಂಕಿನ ಆಡಳಿತ ಸಮಿತಿಯ ಚುನಾವಣೆಯನ್ನು ಮುಂದೂಡಿ ದಿನಾಂಕ: 31.12.2006 ರೊಳಗೆ ನಡೆಸತಕ್ಕದೆಂದೂ ಹಾಗೆ ಆಡಳಿತ ಸಮಿತಿಗೆ ಚುನಾವಣೆ ನಡೆಸುವವರೆಗೆ ಹಾಲಿ ಇರುವ ಆಡಳಿತ ವ್ಯವಸ್ಥೆ ಮುಂದುವರೆಯತಕ್ಕದ್ದೆಂದೂ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ರ್. 1481

ವಿಶೇಷ ಕರ್ತವ್ಯಾಧಿಕಾರಿ ಮತ್ತುಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಭಾರತ ಸಂಚಾರ ನಿಗಮ ಇಂಜಿನಿಯರಿಂಗ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು(ಹಿಂದಿನ ಬೆಂಗಳೂರು ಟೆಲಿಗ್ರಾಫ್ ಇಂಜಿನಿಯರಿಂಗ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು) ಇದರ ಆಡಳಿತಗಾರರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–5/130/ಯುಎಂಸಿ/2004–05 ದಿನಾಂಕ: 11.08.2006.

**ಪ್ರಸ್ತಾವನೆ :**

ಭಾರತ ಸಂಚಾರ ನಿಗಮ ಇಂಜಿನಿಯರಿಂಗ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇದರ ಆಡಳಿತ ಮಂಡಳಿಯ ಸದಸ್ಯರು, ಸಂಘದ ಆರ್ಥಿಕ ದುಸ್ಥಿತಿಗೆ ಕಾರಣರಾಗಿ ಸಂಘದ ಸದಸ್ಯರ ಮತ್ತು ಠೇವಣಿದಾರರ ಹಿತಾಸಕ್ತಿಗೆ ಧಕ್ಕೆಯಾಗುವಂತೆ ಕಾರ್ಯನಿರ್ವಹಿಸುತ್ತಿದ್ದ ಹಿನ್ನೆಲೆಯಲ್ಲಿ ದಿನಾಂಕ: 12–04–2005 ರಂದು ಸದರಿ ಸಂಘದ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಕಲಂ 30(1) ರನ್ವಯ ರದ್ದುಪಡಿಸಿ 6 (ಆರು) ತಿಂಗಳ ಅವಧಿಯವರೆಗೆ ಆಡಳಿತಗಾರರನ್ನು ನೇಮಕಾತಿ ಮಾಡಲಾಗಿರುತ್ತದೆ. ತದನಂತರ ಕಾಲಕಾಲಕ್ಕೆ ಸದರಿ ಆಡಳಿತಗಾರರ ಅವಧಿಯನ್ನು ದಿನಾಂಕ: 12.10.2006ರವರೆಗೆ ವಿಸ್ತರಿಸಲಾಗಿರುತ್ತದೆ. ಸಂಘದ ಠೇವಣಿದಾರರ ಠೇವಣಿಗಳ ವಾಪಸಾತಿಯು ಪೂರ್ಣಗೊಳ್ಳದೇ ಇರುವುದರಿಂದ ಸಂಘದ ಸದಸ್ಯರ ಮತ್ತು ಠೇವಣಿದಾರರ ಹಿತದೃಷ್ಟಿಯಿಂದ ಸಂಘಕ್ಕೆ ಆಡಳಿತಗಾರರ ಸೇವೆಯು ಅವಶ್ಯಕತೆ ಇರುವುದನ್ನು ಮನಗಂಡು ಸದರಿಯವರ ಅವಧಿಯನ್ನು ದಿನಾಂಕ: 13.10.2006 ರಿಂದ 6 ತಿಂಗಳ ಅವಧಿಯವರೆಗೆ ವಿಸ್ತರಿಸಲು ಸಹಕಾರ ಸಂಘಗಳ ನಿಬಂಧಕರು ತಮ್ಮ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 176 ಸಿಎಲ್‌ಎಮ್ 2006, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1)ನ್ನು ಈ ಕೆಳಕಂಡ ಮಾರ್ಪಾಟುಗಳೊಂದಿಗೆ, ಭಾರತ ಸಂಚಾರ ನಿಗಮ ಇಂಜಿನಿಯರಿಂಗ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ;

**'30ರ ಪ್ರಕರಣದಲ್ಲಿ,**

(1) ನೇ ಉಪ ಪ್ರಕರಣದಲ್ಲಿರುವ 'ಒಂದು ವರ್ಷ' ಎಂಬ ಪದಕ್ಕೆ ಬದಲಾಗಿ 'ಹದಿನೆಂಟು ತಿಂಗಳು' ಎಂಬುದಾಗಿ ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ30 (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:12.04.2007 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣದ 31(1)ರ ಉಪಬಂಧಗಳು ಪುನಃಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1395

ವಿಶೇಷ ಕರ್ತವ್ಯಾಧಿಕಾರಿ ಮತ್ತುಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಕೋಲಾರ ಡಿಸಿಸಿ ಬ್ಯಾಂಕ್ ನಿ., ಕೋಲಾರ ಇದರ ವಿಶೇಷಾಧಿಕಾರಿ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಜಂಟಿ ನಿಬಂಧಕರು ಸಂ:ಸಿಆರ್‌ಡಿ–ಸಿಎಬಿ:1:2003–04 ದಿನಾಂಕ: 22.08.2006.

**ಪ್ರಸ್ತಾವನೆ :**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1) ರ ಪ್ರಕಾರ ಕೋಲಾರ ಜಿಲ್ಲಾಧಿಕಾರಿಯವರನ್ನು ಕೋಲಾರ ಡಿ.ಸಿ.ಸಿ ಬ್ಯಾಂಕಿನ ವಿಶೇಷಾಧಿಕಾರಿಯನ್ನಾಗಿ ದಿನಾಂಕ: 20.08.2004 ರಂದು ನೇಮಿಸಲಾಗಿದ್ದು, ನಂತರ ವಿಶೇಷಾಧಿಕಾರಿಯ ಅವಧಿಯನ್ನು 6 ತಿಂಗಳಿಗೊಮ್ಮೆ ದಿನಾಂಕ: 19.08.2006 ರ ವರೆಗೆ ವಿಸ್ತರಿಸಲಾಗಿದೆ.

ಕೋಲಾರ ಡಿ.ಸಿ.ಸಿ ಬ್ಯಾಂಕಿನ ಆರ್ಥಿಕ ಸ್ಥಿತಿಯು ಇನ್ನೂ ಸುಧಾರಿಸಬೇಕಾಗಿದ್ದು, ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ 1949ರ ಪ್ರಕರಣ 11(1)ಅನ್ನು ಪಾಲಿಸಲು ವಿಫಲವಾಗಿರುವುದಲ್ಲದೆ ಇದರ ನೆಟ್ವರ್ತ್ ಮೌಲ್ಯವು ದಿನಾಂಕ: 30.06.2006ಕ್ಕೆ ರೂ.(–) 18.40 ಕೋಟಿ ಗಳಾಗಿರುವುದರಿಂದ ಅಲ್ಲದೇ ಎನ್.ಪಿ.ಎ ಸಾಲಗಳು ಶೇ 90 ರಷ್ಟಿರುವುದರಿಂದ ಸದರಿ ಸಾಲಗಳ ವಸೂಲಾತಿಗಾಗಿ ಕಠಿಣ ಕ್ರಮ ಕೈಗೊಳ್ಳಬೇಕಾಗಿರುವುದರಿಂದ ಬ್ಯಾಂಕಿನ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ: 20.08.2006 ರಿಂದ ಆರು ತಿಂಗಳವರೆಗೆ ವಿಸ್ತರಿಸಲು ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿದ್ದಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 175 ಸಿಎಲ್‌ಎಮ್ 2006, ಬೆಂಗಳೂರು, ದಿನಾಂಕ: 08ನೇ ಸೆಪ್ಟೆಂಬರ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ, ಕೋಲಾರ ಡಿ.ಸಿ.ಸಿ ಬ್ಯಾಂಕ್ ನಿ., ಕೋಲಾರ ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ;

**'31ರ ಪ್ರಕರಣದಲ್ಲಿ,**

(1)ನೇ ಉಪ ಪ್ರಕರಣದಲ್ಲಿರುವ **'ಒಂದು ವರ್ಷ'** ಎಂಬ ಪದಕ್ಕೆ ಬದಲಾಗಿ **'ಇಪ್ಪತ್ತನಾಲ್ಕು ತಿಂಗಳು'** ಎಂಬುದಾಗಿ ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ31 (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:19.02.2007 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31(1)ರ ಉಪಬಂಧಗಳು ಪುನ:ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1420 ವಿಶೇಷ ಕರ್ತವ್ಯಾಧಿಕಾರಿ ಮತ್ತುಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಆಯುಕ್ತರ ಕಛೇರಿಗೆ ಸೃಜಿಸಲಾಗಿರುವ ಕಂಪ್ಯೂಟರ್ ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ಬೆರಳಚ್ಚುಗಾರರ ಹುದ್ದೆಗೆ ಪರಿವರ್ತಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಂಕಇ 95 ಕೆಎಂಯು 2004 ದಿನಾಂಕ: 26-08-2004
2. ಸರ್ಕಾರದ ಆದೇಶ ಸಂಖ್ಯೆ: ಸಿಐ 9 ಎಸ್.ಪಿ.ಡಿ. 2005 ದಿನಾಂಕ:1-3-2006.
3. ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆರವರ ಪತ್ರ ಸಂಖ್ಯೆ: ಆಪ್ರಾಸಂಪ/ಇ.ಎಸ್.ಟಿ/ 2005-06 ದಿನಾಂಕ:29-3-2006 ಮತ್ತು ದಿನಾಂಕ:4-8-2006 ಕ್ಕೆ ಅಂತ್ಯಗೊಂಡ ಪತ್ರ ವ್ಯವಹಾರಗಳು.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:26-08-2004 ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇಲ್ಲಿನ ಆಯುಕ್ತರ ಕಛೇರಿಗೆ ಇತರೆ ಹುದ್ದೆಗಳ ಜೊತೆಗೆ ಕಂಪ್ಯೂಟರ್ ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಹೆಚ್ಚುವರಿ ಕೋಶ ಅಥವಾ ಸೂಕ್ತ ಏಜನ್ಸಿ ಮೂಲಕ ಅಭ್ಯರ್ಥಿಗಳನ್ನು ಪಡೆದು ಭರ್ತಿ ಮಾಡುವ ಷರತ್ತಿಗೆ ಒಳಪಡಿಸಿ ಸೃಜಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ದಿನಾಂಕ:01-03-2006ರ ಸರ್ಕಾರಿ ಆದೇಶದಲ್ಲಿ ಸರಕು ಖರೀದಿ ಇಲಾಖೆಯ ಶ್ರೀಮತಿ ಹೆಚ್.ಕೆ.ಉಮಾ ಬೆರಳಚ್ಚುಗಾರ್ತಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16(ಎ) (II) ರ ಪ್ರಕಾರ ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆಗೆ ಶಾಶ್ವತ ವರ್ಗಾವಣೆ ಮಾಡಿ ನೇಮಿಸಲಾಗಿದೆ.

ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 04-08-2006ರ ಪತ್ರದಲ್ಲಿ ಶ್ರೀಮತಿ ಹೆಚ್.ಕೆ.ಉಮಾ, ಬೆರಳಚ್ಚುಗಾರ್ತಿ ಇವರನ್ನು ಸರ್ಕಾರದ ಆದೇಶ ಸಂಖ್ಯೆ: ಸಿಐ 9 ಎಸ್‌ಪಿಡಿ 2005 ದಿನಾಂಕ 1-3-2006ರಲ್ಲಿ ಆಯುಕ್ತರ ಕಛೇರಿಗೆ ವರ್ಗಾವಣೆ ಮಾಡಿ ನೇಮಿಸಿದ್ದು ಅದರಂತೆ ಸದರಿ ನೌಕರರು ದಿನಾಂಕ 1-3-2006ರಂದು ಕರ್ತವ್ಯಕ್ಕೆ ವರದಿ ಮಾಡಿರುತ್ತಾರೆಂದು ಆದರೆ ಬೆರಳಚ್ಚುಗಾರರ ಹುದ್ದೆಯು ಆಯುಕ್ತರ ಕಛೇರಿಯಲ್ಲಿ ಸೃಜಿಸಿಲ್ಲವಾದ್ದರಿಂದ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಆಯುಕ್ತರ ಕಛೇರಿಗೆ ಬೆರಳಚ್ಚುಗಾರರ ಅವಶ್ಯಕತೆ ಇರುವುದರಿಂದ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಬೆಂಗಳೂರು ಇಲ್ಲಿರುವ ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ಬೆರಳಚ್ಚುಗಾರರ ಹುದ್ದೆಯನ್ನಾಗಿ ಪರಿವರ್ತಿಸಿ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 67 ಕೆಎಂಯು 2006, ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್ 2006.**

ಸರ್ಕಾರವು ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯಲ್ಲಿ ಮಂಜೂರಾಗಿರುವ ಕಂಪ್ಯೂಟರ್ ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ಸೃಜಿಸಲು ಇನ್ನು ಮುಂದೆ ಕೋರಿಕೆಯನ್ನು ಸಲ್ಲಿಸಬಾರದು ಎಂಬ ಷರತ್ತನ್ನು ವಿಧಿಸಿ ಈಗಿರುವ ರೂ.3850-7050ಗಳ ಕಂಪ್ಯೂಟರ್ ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ರೂ.3000-5450ರ ಬೆರಳಚ್ಚುಗಾರರ ಹುದ್ದೆಗೆ ಪರಿವರ್ತಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1529 ವೆಚ್ಚ-5:2006 ದಿನಾಂಕ 16-9-2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1488 ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಪ್ರಶಾಂತ್ ಬಾರಿಗಿಡದ್, ಉಪ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿತ್ರದುರ್ಗ, ಇವರ ವಿರುದ್ಧ ಶಿಸ್ತು ಕ್ರಮ ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಕೈಮಗ್ಗ ಮತ್ತು ಜವಳಿ ಇಲಾಖೆ ಪತ್ರದ ಸಂಖ್ಯೆ: ಕೈಜ ಇ/ಅ.ಸಿ.ಸಿ4/2005–06 ದಿನಾಂಕ:05.07.2005.
2. ಕೈಮಗ್ಗ ಮತ್ತು ಜವಳಿ ಇಲಾಖೆ ಪತ್ರದ ಸಂಖ್ಯೆ: : ಕೈಜಇ/ಅ.ಸಿ.ಸಿ4/2005–06 ದಿನಾಂಕ:15.09.2005.
3. ಕೈಮಗ್ಗ ಮತ್ತು ಜವಳಿ ಇಲಾಖೆ ಪತ್ರದ ಸಂಖ್ಯೆ: : ಕೈಜಇ/ಅ.ಸಿ.ಸಿ4/2005–06 ದಿನಾಂಕ:14.12.2005.
4. ಕೈಮಗ್ಗ ಮತ್ತು ಜವಳಿ ಇಲಾಖೆ ಪತ್ರದ ಸಂಖ್ಯೆ: : ಕೈಜಇ/ಅ.ಸಿ.ಸಿ4/2005–06 ದಿನಾಂಕ:13.03.2006.
5. ಕೈಮಗ್ಗ ಮತ್ತು ಜವಳಿ ಇಲಾಖೆ ಪತ್ರದ ಸಂಖ್ಯೆ: : ಕೈಜಇ/ಅ.ಸಿ.ಸಿ4/2006–07 ದಿನಾಂಕ:30.06.2006.
6. ಶ್ರೀ ಪ್ರಶಾಂತ್ ಬಾರಿಗಿಡದ್, ಉಪ ನಿರ್ದೇಶಕರು, ಖಾಗ್ರಾ, ಜಿಲ್ಲಾ ಪಂಚಾಯತ್ ಮಡಿಕೇರಿ, ಇವರ ಮನವಿ ಪತ್ರ ದಿನಾಂಕ:21.07.2006.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ 1 ರಿಂದ 5ರ ಪತ್ರಗಳಲ್ಲಿ ಜವಳಿ ಅಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ರವರು ಪ್ರಸ್ತಾವನೆಯನ್ನು ಸಲ್ಲಿಸಿ, ಶ್ರೀ ಪ್ರಶಾಂತ್ ಬಾರಿಗಿಡದ್, ಉಪ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್ ಚಿತ್ರದುರ್ಗ, ಇವರ ಮೇಲೆ ಶ್ರೀ ಮುರುಗೇಶ್, ಮತ್ತಿತರರು , ಸಲ್ಲಿಸಿರುವ ದೂರಿನ ಅನ್ವಯ ಜಂಟಿ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಕೇಂದ್ರ ಕಛೇರಿ ಬೆಂಗಳೂರು, ರವರು ದಿನಾಂಕ:06.04.2005 ಮತ್ತು 07.04.2005ರಂದು ಚಿತ್ರದುರ್ಗ ಕಛೇರಿಯ ಡಿ.ಎಲ್.ಇ.ಮೇಳ ಲೆಕ್ಕಪತ್ರಗಳನ್ನು ಪರಿಶೀಲಿಸಿ ಅಧಿಕಾರಿಯವರು ಗುರುತರವಾದ ನ್ಯೂನತೆಗಳನ್ನು ಹಾಗೂ ಲೋಪದೋಷಗಳನ್ನು ಎಸಗಿರುವ ಬಗ್ಗೆ ವಿಚಾರಣಾ ವರದಿ ಸಲ್ಲಿಸಿದ್ದಾರೆ. ಸದರಿ ಅಧಿಕಾರಿಯು ಕೇಂದ್ರ ಸರ್ಕಾರದ ಸಹಾಯ ಧನವನ್ನು ಅನುಷ್ಠಾನಗೊಳಿಸುವ ಸಂಬಂಧದಲ್ಲಿ ಹಾಗೂ ಇಲಾಖೆಯ ವಿವಿಧ ಕಾರ್ಯಕ್ರಮಗಳನ್ನು ನಿರ್ವಹಿಸುವಲ್ಲಿ ಗುರುತರವಾದ ಆರೋಪ ಲೋಪದೋಷಗಳಿರುತ್ತದೆ. ಅಧಿಕಾರಿಯವರ ಮೇಲಿರುವ ಆರೋಪಗಳ ಪಟ್ಟಿ ಸಮರ್ಥನಾ ಹೇಳಿಕೆ ದಾಖಲಾತಿ ಮತ್ತು ಸಾಕ್ಷಿಗಳ ಪಟ್ಟಿಯನ್ನು ಅನುಬಂಧ 1 ರಿಂದ 4ರವರೆಗೆ ತಯಾರಿಸಿ ವಿಚಾರಣಾ ವರದಿ ಹಾಗೂ ದಾಖಲಾತಿಗಳನ್ನು ಸರ್ಕಾರಕ್ಕೆ ಸಲ್ಲಿಸಿ ಕರ್ನಾಟಕ ನಾಗರೀಕ ಸೇವಾ ನಡತೆ ನಿಯಮಾವಳಿ ಅನ್ವಯ ಅಧಿಕಾರಿಯವರ ವಿಚಾರಣೆ ಕಾಯ್ದಿರಿಸಿ ಶಿಸ್ತಿನ ಕ್ರಮ ಕೈಗೊಳ್ಳಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ. ಅದರಂತೆ ಶ್ರೀ ಪ್ರಶಾಂತ್ ಬಾರಿಗಿಡದ್, ಉಪ ನಿರ್ದೇಶಕರು, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು ನಿಯಮ 11 ರಡಿ 1, 2,3, ಮತ್ತು 4 ರ ಪಟ್ಟಿಯೊಂದಿಗೆ ದಿನಾಂಕ:28.02.2006ರಂದು ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ 6ರ ಪತ್ರದಲ್ಲಿ ಆಪಾದಿತ ಅಧಿಕಾರಿಯು ಕಾರಣ ಕೇಳುವ ನೋಟೀಸಿಗೆ ಉತ್ತರವನ್ನು ಸರ್ಕಾರಕ್ಕೆ ಒದಗಿಸಿದ್ದಾರೆ. ಆದ ಕಾರಣ ಅಪಾದಿತ ಅಧಿಕಾರಿಯ ಮೇಲೆ ಹೊರಿಸಿರುವ ಆರೋಪಗಳ ಸತ್ಯಾ–ಸತ್ಯತೆಯನ್ನು ತಿಳಿಯಲು ಮುಂದಿನ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಅದೇಶ ಸಂಖ್ಯೆ: ವಾಕೈ/160/ಕೈಸೇವಿ/2005/ಬೆಂಗಳೂರು/ದಿನಾಂಕ:28ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿದ ನಂತರ ಶ್ರೀ ಪ್ರಶಾಂತ್ ಬಾರಿಗಿಡದ್, ಉಪ ನಿರ್ದೇಶಕರು, (ಖಾಗ್ರಾ) ಜಿಲ್ಲಾ ಪಂಚಾಯತ್ ಮಡಿಕೇರಿ ಇವರು ಉಪ ನಿರ್ದೇಶಕರಾಗಿ ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿತ್ರದುರ್ಗ, ಮತ್ತು ಶಿವಮೊಗ್ಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕೈಮಗ್ಗ ಮೇಳ ಕಾರ್ಯಕ್ರಮಗಳನ್ನು ನಿರ್ವಹಿಸುವಲ್ಲಿ/ ಅನುಷ್ಠಾನಗೊಳಿಸುವಲ್ಲಿ ನಿಯಮಾವಳಿಗಳನ್ನು ಪಾಲಿಸದೆ ಅಧಿಕಾರ ದುರುಪಯೋಗ/ಕರ್ತವ್ಯ ಲೋಪ ಈ ವರ್ತನೆಯು ಕೆ.ಸಿ.ಎಸ್.(ನಡತೆ) ನಿಯಮಾವಳಿಗಳನ್ನು ಉಲ್ಲಂಘಿಸಿದಂತಾಗಿ ಸರ್ಕಾರಿ ನೌಕರರಿಗೆ ಸಲ್ಲದ ಕೃತ್ಯವನ್ನು ಎಸಗಿದಂತಾಗುತ್ತದೆ. ಆದುದರಿಂದ ಈ ಬಗ್ಗೆ ಕೆ.ಸಿ.ಎಸ್.(ಸಿ.ಸಿ.ಎ) ನಿಯಮಾವಳಿ 1957ರ ನಿಯಮ 11 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಬಿ.ಎಲ್.ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ.239/1 ನಾಗಶ್ರೀ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು. ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕೆ.ಸಿ.ಎಸ್ (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 11 (5) (ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಕೆ.ಶಿವಕುಮಾರ್, ಉಪ ನಿರ್ದೇಶಕರು, (ಕೈಮಗ್ಗ) ಮತ್ತು ಜವಳಿ ಇಲಾಖೆ ಕೇಂದ್ರ ಕಛೇರಿ. ಬೆಂಗಳೂರು ಇವರನ್ನು (ಅಥವಾ ಇವರ ಸ್ಥಾನದಲ್ಲಿ ವರ್ಗಾವಣೆಗೊಂಡು ಕರ್ತವ್ಯ ನಿರ್ವಹಿಸುವ ಅಧಿಕಾರಿಯವರನ್ನು) ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಆಯುಕ್ತರು, ಜವಳಿ ಇವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ/ಲಭ್ಯವಿರುವ ಶೀಘ್ರಲಿಪಿಗಾರರು/ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ಜವಳಿ ಇಲಾಖೆ ಇವರಿಗೆ ಸೂಚಿಸಲಾಗಿದೆ.

ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ, ಈ ಸಂಬಂಧ ವಿಚಾರಣಾಧಿಕಾರಿಗಳಿಗೆ ನಿಗದಿತ ಸಂಚಿತ ಸಂಭಾವನೆಯಾದ ರೂ 6000/–(ರೂಪಾಯಿ ಆರು ಸಾವಿರಗಳು ಮಾತ್ರ) ಹಾಗೂ ವಾಹನ ಭತ್ಯೆ ರೂ 1000/– (ರೂಪಾಯಿ ಒಂದು ಸಾವಿರ ಮಾತ್ರ)ಗಳನ್ನು ಸಂಬಂಧಿಸಿದ ಕಛೇರಿಯ ಲೆಕ್ಕ ಶೀರ್ಷಿಕೆಯಿಂದ ಜವಳಿ ಅಭಿವೃದ್ಧಿ ಆಯುಕ್ತರೇ ಪಾವತಿ ಮಾಡುವುದು. ವಿಚಾರಣಾಧಿಕಾರಿಗಳು ಮೂರು ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್.ವಾಸನ್**

ಪಿ.ಆರ್. 1516

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**ವಿಷಯ:–** ಕುಶಲಕರ್ಮಿ ತರಬೇತಿ ಸಂಸ್ಥೆಗಳಿಗೆ ಕೈಗಾರಿಕಾ ಉತ್ತೇಜನಾಧಿಕಾರಿಗಳನ್ನು ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ನೇಮಿಸುವುದರ ಬಗ್ಗೆ.

**ಓದಲಾಗಿದೆ:–**1) ಸರ್ಕಾರದ ಆದೇಶ ಸಂಖ್ಯೆ:ಸಿಐ 169 ಐಸಿಎಸ್ 2003, ದಿನಾಂಕ: 27.10.2003

2) ಸರ್ಕಾರಿ ಆದೇಶ ಸಂಖ್ಯೆ:ವಾಕೈ 08 ಕೈಸೇವಿ 2005, ದಿನಾಂಕ:01.09.2005.

3) ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಲೆಕ್ಕಪತ್ರ/ಎ1/ಎಟಿಐ/55/2005–06 ದಿನಾಂಕ: 16.09.2005

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯನ್ನು ಪುನರ್‌ರಚಿಸಲಾಗಿದ್ದು, ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಒಟ್ಟು 27 ಕುಶಲಕರ್ಮಿ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಲಾಗಿರುತ್ತದೆ. ಉಲ್ಲೇಖ (2) ರ ಸರ್ಕಾರಿ ಆದೇಶದಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ 19 ಜಿಲ್ಲೆಗಳಲ್ಲಿನ ಕುಶಲಕರ್ಮಿ ತರಬೇತಿ ಸಂಸ್ಥೆಗಳಿಗೆ ಕೈಗಾರಿಕಾ ಉತ್ತೇಜನಾಧಿಕಾರಿಗಳನ್ನು ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳನ್ನಾಗಿ ಘೋಷಿಸುವ ಬಗ್ಗೆ ಮಹಾಲೇಖಪಾಲರಿಂದ ಅಧಿಕಾರ ಪತ್ರ (Authorisation) ಪಡೆಯುವ ಷರತ್ತಿಗೊಳಪಟ್ಟು ನೇಮಿಸಲಾಗಿದೆ.

ಹೊಸದಾಗಿ ಸ್ಥಾಪಿಸಲಾಗಿರುವ ಉಳಿದ 8 ಜಿಲ್ಲೆಗಳಲ್ಲಿನ ಕುಶಲಕರ್ಮಿ ತರಬೇತಿ ಸಂಸ್ಥೆಗಳಿಗೂ ಸಹ ಕೈಗಾರಿಕಾ ಉತ್ತೇಜನಾಧಿಕಾರಿಗಳನ್ನು ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಯನ್ನಾಗಿ ನೇಮಿಸುವಂತೆ ಉಲ್ಲೇಖ (3)ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ವಾಕೈ 08 ಕೈಸೇವಿ 2005, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಹೊಸದಾಗಿ ಸ್ಥಾಪಿಸಲಾಗಿರುವ ಉಳಿದ 08 ಜಿಲ್ಲೆಗಳಲ್ಲಿನ (ಎಂಟು) ಕುಶಲಕರ್ಮಿ ತರಬೇತಿ ಸಂಸ್ಥೆಗಳಿಗೆ ಕೈಗಾರಿಕಾ ಉತ್ತೇಜನಾಧಿಕಾರಿಗಳನ್ನು ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳನ್ನಾಗಿ ಘೋಷಿಸುವ ಬಗ್ಗೆ ಮಹಾಲೇಖಪಾಲರಿಂದ ಅಧಿಕಾರ ಪತ್ರ (Authorisation) ಪಡೆಯುವ ಷರತ್ತಿಗೊಳಪಟ್ಟು ನೇಮಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 184 ವೆಚ್ಚ–1 2005, ದಿನಾಂಕ:21.10.2006 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್.ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ ವಾಕೈ 08 ಕೈಸೇವಿ 2005, ದಿನಾಂಕ:31.10.2006**

**ಹೊಸದಾಗಿ ಸ್ಥಾಪಿಸಲಾಗಿರುವ ಕುಶಲಕರ್ಮಿ ತರಬೇತಿ ಸಂಸ್ಥೆಗಳು,**

| ಕ್ರಮ ಸಂಖ್ಯೆ | ಕುಶಲಕರ್ಮಿ ತರಬೇತಿ ಸಂಸ್ಥೆ | ಅಧಿಕಾರಿಯ ಪದನಾಮ |
|---|---|---|
| 1 | ಕುಶಲಕರ್ಮಿ ತರಬೇತಿ ಸಂಸ್ಥೆ, ನೆಲಮಂಗಲ ಬೆಂಗಳೂರು (ನಗರ ಜಿಲ್ಲೆ) | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲಕರ್ಮಿ ತರಬೇತಿ ಸಂಸ್ಥೆ, ನೆಲಮಂಗಲ ಬೆಂಗಳೂರು (ನಗರ ಜಿಲ್ಲೆ) |
| 2 | ಕುಶಲಕರ್ಮಿ ತರಬೇತಿ ಸಂಸ್ಥೆ, ಗದಗ್, | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲಕರ್ಮಿ ತರಬೇತಿ ಸಂಸ್ಥೆ, ಗದಗ್, |
| 3 | ಕುಶಲಕರ್ಮಿ ತರಬೇತಿ ಸಂಸ್ಥೆ, ಬಾಗಲಕೋಟೆ, | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲಕರ್ಮಿ ತರಬೇತಿ ಸಂಸ್ಥೆ, ಬಾಗಲಕೋಟೆ, |
| 4 | ಕುಶಲಕರ್ಮಿ ತರಬೇತಿ ಸಂಸ್ಥೆ, ಮಡಿಕೇರಿ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲಕರ್ಮಿ ತರಬೇತಿ ಸಂಸ್ಥೆ, ಮಡಿಕೇರಿ |
| 5 | ಕುಶಲಕರ್ಮಿ ತರಬೇತಿ ಸಂಸ್ಥೆ, ದಾವಣಗೆರೆ, | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲಕರ್ಮಿ ತರಬೇತಿ ಸಂಸ್ಥೆ, ದಾವಣಗೆರೆ, |
| 6 | ಕುಶಲಕರ್ಮಿ ತರಬೇತಿ ಸಂಸ್ಥೆ, ಮಲ್ಪೆ, ಉಡುಪಿ ಜಿಲ್ಲೆ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲಕರ್ಮಿ ತರಬೇತಿ ಸಂಸ್ಥೆ, ಮಲ್ಪೆ, ಉಡುಪಿ ಜಿಲ್ಲೆ |
| 7 | ಕುಶಲಕರ್ಮಿ ತರಬೇತಿ ಸಂಸ್ಥೆ, ಚಾಮರಾಜನಗರ, | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲಕರ್ಮಿ ತರಬೇತಿ ಸಂಸ್ಥೆ, ಚಾಮರಾಜನಗರ |

| ಕ್ರಮ ಸಂಖ್ಯೆ | ಕುಶಲಕರ್ಮಿ ತರಬೇತಿ ಸಂಸ್ಥೆ | ಅಧಿಕಾರಿಯ ಪದನಾಮ |
|---|---|---|
| 8 | ಕುಶಲಕರ್ಮಿ ತರಬೇತಿ ಸಂಸ್ಥೆ, ಹಾವೇರಿ, | ಕೈಗಾರಿಕಾ ಉತ್ತೇಜನಾಧಿಕಾರಿ<br>ಕುಶಲಕರ್ಮಿ ತರಬೇತಿ ಸಂಸ್ಥೆ, ಹಾವೇರಿ, |

**ಎಲ್.ಎಸ್.ವಾಸನ್**

ಪಿ.ಆರ್. 1594

ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ 2ನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006, ದಿನಾಂಕ: 7–4–2006.
2. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 70 ಕೆಎಂಯು 2006, ದಿನಾಂಕ: 23–05–2006.
3. ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಅವರ ಪತ್ರ ಸಂಖ್ಯೆ:ಹವಿಪಪ್ರನಿಪ್ರಾ: ಹೊ:2006–07/552 ದಿನಾಂಕ: 05–09–2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ 2006–07ನೇ ಸಾಲಿಗೆ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಲೆಕ್ಕ ಶೀರ್ಷಿಕೆ 2205–00–103–0–18 (ಯೋಜನೇತರ) 101 ಸಹಾಯಾನುದಾನ ಇದರಡಿಯಲ್ಲಿ ರೂ.25.00 ಲಕ್ಷ ಅನುದಾನವನ್ನು ನಿಗದಿಪಡಿಸಲಾಗಿತ್ತು.

ಮುಂದುವರಿದಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 23–05–2006ರ ಸರ್ಕಾರಿ ಆದೇಶದಲ್ಲಿ ಮೊದಲನೇ ಕಂತಾಗಿ ರೂ.8.00 ಲಕ್ಷಗಳ ಅನುದಾನವನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಮೈಸೂರು ರವರ ಮೂಲಕ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಬಿಡುಗಡೆ ಮಾಡಲಾಗಿತ್ತು. ಆಯುಕ್ತರು ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ಹೊಸಪೇಟೆ ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 05–09–2006ರ ಪತ್ರದಲ್ಲಿ 2ನೇ ಕಂತಿನ ಹಣವನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 194 ಕೆಎಂಯು 2006 ಬೆಂಗಳೂರು, ದಿನಾಂಕ: 02ನೇ ನವೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇದಕ್ಕೆ 2006–07ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ: 2205–00–103–0–18 (ಯೋಜನೇತರ) ಉಪಶೀರ್ಷಿಕೆ 101 ಸಹಾಯಾನುದಾನ ಅಡಿಯಲ್ಲಿ ಒದಗಿಸಲಾಗಿರುವ ಖರ್ಚುಗಳನ್ನು ರೂ.25.00 ಲಕ್ಷಗಳ ಅನುದಾನದಲ್ಲಿ ನವೆಂಬರ್ 2006 ರವರೆಗಿನ ಖರ್ಚುಗಳನ್ನು ಭರಿಸಲು ರೂ. 8.00 ಲಕ್ಷಗಳನ್ನು (ರೂಪಾಯಿ ಎಂಟು ಲಕ್ಷಗಳು ಮಾತ್ರ) ಗಳನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರಿಗೆ ಈ ಮೂಲಕ ಅನುಮತಿ ನೀಡಲಾಗಿದೆ.

1. ಸರ್ಕಾರವು ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸುವುದು.
2. ಹಿಂದಿನ ಸಾಲುಗಳಲ್ಲಿ ಸರ್ಕಾರ ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸುವುದು.
3. ಈ ಕಾರ್ಯಚಟುವಟಿಕೆಗಳ ಬಗ್ಗೆ ಅನುಪಾಲನಾ ವರದಿ ಸಲ್ಲಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 914 ಐಎಫ್ (ಬಿ.ಎ) 2006, ದಿನಾಂಕ: 9.10.2006 ರಲ್ಲಿ ನೀಡಿರುವ ಅಭಿಪ್ರಾಯದ ಮೇರೆಗೆ ಹಾಗೂ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 3 ಬಿಪಿಇ 2006 ದಿನಾಂಕ: 31–03–2006 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಶಿವರಾಮ್**

ಪಿ.ಆರ್. 1566

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ. (ಆಡಳಿತ ಕನ್ನಡ).

**ವಿಷಯ:** 2006ರ ಸೆಪ್ಟೆಂಬರ್ ಮಾಹೆಯಲ್ಲಿ ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಎಂಬ ವಿಷಯದ ಬಗ್ಗೆ ವಿಚಾರ ಸಂಕಿರಣವನ್ನು ಏರ್ಪಡಿಸುವ ಸಂಬಂಧ ಅನುದಾನ ರೂ.1.25ಲಕ್ಷ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಸಂಕಇ 60 ಸ್ವೀಮರ 2006 ದಿನಾಂಕ 7–4–2006.
2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ:ಡಿಎಎಂ:ಎಸಿಟಿ:1:38: ವಿಸ:2006–07 ದಿನಾಂಕ 18–8–2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 7–4–2006ರ ಸರ್ಕಾರದ ಆದೇಶದಲ್ಲಿ ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ವಿಚಾರ ಸಂಕಿರಣಕ್ಕಾಗಿ ರೂ.1.25 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 18–8–2006ರ ತಮ್ಮ ಪತ್ರದಲ್ಲಿ ಸದರಿ ವಿಚಾರ ಸಂಕಿರಣವನ್ನು ಕೈಗೊಳ್ಳಲು ಒಟ್ಟು ರೂ.1.25 ಲಕ್ಷಗಳ ವೆಚ್ಚಕ್ಕೆ ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 175 ಕೆಎಂಯು 2006, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2006.**

ಸರ್ಕಾರವು 2006ರ ಸೆಪ್ಟೆಂಬರ್ ಮಾಹೆಯಲ್ಲಿ ಜರುಗಲಿರುವ ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಎಂಬ ವಿಚಾರ ಸಂಕಿರಣವನ್ನು ನಡೆಸುವ ಸಲುವಾಗಿ ರೂ.1.25 ಲಕ್ಷಗಳನ್ನು ವೆಚ್ಚ ಮಾಡಲು ಈ ಮೂಲಕ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಅನುಮತಿ ನೀಡುತ್ತದೆ. ಈ ಸಂಬಂಧದ ವೆಚ್ಚವನ್ನು 2006–07ರ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059 ಇತರ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 812 ಐಎಫ್(ಬಿಎ) 2006 ದಿನಾಂಕ 19–9–2006ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಶಿವರಾಮ್**

ಪಿ.ಆರ್. 1523

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಜಂಟಿ ಇಲಾಖಾ ವಿಚಾರಣೆ-1)ಶ್ರೀ ಡಿ.ಬಿ.ಗಣಾಚಾರಿ, ಸರ್ಕಾರದ ಅಧೀನ ಕಾರ್ಯದರ್ಶಿ, 2)ಶ್ರೀ ಮುಕ್ತರ್ ಪಾಷಾ, 3)ಶ್ರೀ ಕೆ.ವೈ. ರಮೇಶ್, ಸಹಾಯಕರುಗಳು, 4)ಶ್ರೀ ಶ್ರೀನಿವಾಸ, ಕಿರಿಯ ಸಹಾಯಕ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ), ಕರ್ನಾಟಕ ಸರ್ಕಾರದ ಸಚಿವಾಲಯ ಅವರುಗಳ ವಿರುದ್ಧ ಸಿ.ಸಿ.ಎ. ನಿಯಮ 14-ಎ ರನ್ವಯ ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಅರೆ ಸರ್ಕಾರಿ ಪತ್ರ ಸಂ:Compt/UPLOK/BCD/345/2006/ARE-2 ದಿ:05.09.06 ಹಾಗೂ ಉಪ ಲೋಕಾಯುಕ್ತರ ದಿ:04.09.06ರ ತನಿಖಾ ವರದಿ.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ ಇಲಾಖೆ)ಯಲ್ಲಿ ಶ್ರೀ ಡಿ.ಬಿ.ಗಣಾಚಾರಿ ಅವರು ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯಲ್ಲಿ, ಶ್ರೀ ಮುಕ್ತರ್ ಪಾಷಾ, ಶ್ರೀ ಕೆ.ವೈ.ರಮೇಶ್ ಅವರುಗಳು ಸಹಾಯಕರ ಹುದ್ದೆಯಲ್ಲಿ ಹಾಗೂ ಶ್ರೀ ಶ್ರೀನಿವಾಸ ಅವರು ಕಿರಿಯ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಹೊಸದಾಗಿ ನರ್ಸಿಂಗ್ ಶಾಲೆಗಳನ್ನು ತೆರೆಯಲು ಹಾಗೂ ಪಾರಾಮೆಡಿಕಲ್ ಕಾಲೇಜುಗಳಲ್ಲಿ ಹೊಸ ಕೋರ್ಸ್‌ಗಳನ್ನು ಪ್ರಾರಂಭಿಸಲು ಸರ್ಕಾರದ ಅನುಮತಿಗಾಗಿ ಸಲ್ಲಿಸಿರುವ ಅರ್ಜಿದಾರರುಗಳಿಂದ ಆದೇಶ ಹೊರಡಿಸುವ ಕುರಿತಂತೆ ಅವರುಗಳಿಂದ ಲಂಚ ಕೇಳಿ ಪಡೆಯುತ್ತಿರುವುದು ವಿಶ್ವಾಸನೀಯ ಮೂಲಗಳಿಂದ ತಿಳಿದು ಬಂದ ಮೇರೆಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 7(2)ರಡಿಯಲ್ಲಿ ಸ್ವಯಂ ಪ್ರೇರಣೆಯಿಂದ ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗವು ದಿ:28.07.06ರಂದು ಕಛೇರಿ ಮೇಲೆ ದಾಳಿ ನಡೆಸಿದ ಸಂದರ್ಭದಲ್ಲಿ ಮೇಲ್ಕಂಡ ಅಧಿಕಾರಿ/ನೌಕರರುಗಳ ವಶದಲ್ಲಿ ಒಟ್ಟು ರೂ.87,760/- ಹಣ ದೊರಕಿರುವುದರಿಂದ ಅವರುಗಳ ವಿರುದ್ಧ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಗೆ ವಹಿಸುವಂತೆ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿಯಲ್ಲಿ ದಿ:04.09.06ರಂದು ಸಲ್ಲಿಸಿರುವ ವರದಿಯಲ್ಲಿ ಉಪ ಲೋಕಾಯುಕ್ತರವರು ಶಿಫಾರಸ್ಸು ಮಾಡಿದ್ದಾರೆ. ಮೇಲೆ ಓದಲಾದ ದಿ:05.09.06ರ ತಮ್ಮ ಅರೆ ಸರ್ಕಾರಿ ಪತ್ರದಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ಸನ್ಮಾನ್ಯ ಉಪ ಲೋಕಾಯುಕ್ತರವರ ಸದರಿ ವರದಿಯನ್ನು ಸರ್ಕಾರಕ್ಕೆ ಕಳುಹಿಸಿದ್ದಾರೆ. ಉಪ ಲೋಕಾಯುಕ್ತರ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 334 ಎಸ್ಇಎನ್ 06, ಬೆಂಗಳೂರು, ದಿನಾಂಕ:28ನೇ ಅಕ್ಟೋಬರ್ 2006.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು 1)ಶ್ರೀ ಡಿ.ಬಿ.ಗಣಾಚಾರಿ, ಸರ್ಕಾರದ ಅಧೀನ ಕಾರ್ಯದರ್ಶಿ, 2)ಶ್ರೀ ಮುಕ್ತರ್ ಪಾಷಾ, ಸಹಾಯಕ, 3)ಶ್ರೀ ಕೆ.ವೈ.ರಮೇಶ್, ಸಹಾಯಕ ಮತ್ತು 4)ಶ್ರೀ ಶ್ರೀನಿವಾಸ, ಕಿರಿಯ ಸಹಾಯಕ, ಕರ್ನಾಟಕ ಸರ್ಕಾರದ

ಸಚಿವಾಲಯ ಅವರುಗಳ ವಿರುದ್ಧ ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಜಂಟಿ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ಈ ಮೂಲಕ ವಹಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಪಿ.ಆರ್. 1568

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಪ್ರದೀಪ್ ಎಸ್.ರಾಜನಾಳ್, ಸರ್ಕಾರದ ಸಹ ಕಾರ್ಯದರ್ಶಿ ಇವರ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ 43 ಎಸ್ಇಎನ್ 03 ದಿ:02.06.06.
2. ಶ್ರೀ ಪ್ರದೀಪ್ ಎಸ್.ರಾಜನಾಳ್, ಸಹ ಕಾರ್ಯದರ್ಶಿರವರ ದಿ:08.08.06ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಪ್ರದೀಪ್ ಎಸ್.ರಾಜನಾಳ್, ಸರ್ಕಾರದ ಸಹ ಕಾರ್ಯದರ್ಶಿ ಇವರು ಯೋಜನೆ, ಸಾಂಖ್ಯಿಕ, ವಿಜ್ಞಾನ ಹಾಗೂ ತಂತ್ರಜ್ಞಾನ ಇಲಾಖೆಯಲ್ಲಿ 2003ರಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮಾರ್ಚ್ ತಿಂಗಳಲ್ಲಿ ಒಟ್ಟು 19 ದಿನಗಳು, ಮೇ ತಿಂಗಳಲ್ಲಿ ಒಟ್ಟು 15 ದಿನಗಳು ಮತ್ತು ಜುಲೈ ತಿಂಗಳಲ್ಲಿ ಒಟ್ಟು 17 ದಿನಗಳು ಈ ಕೆಳಕಂಡ ಅವಧಿಯಲ್ಲಿ ಒಟ್ಟು 51 ದಿನಗಳು ಮೇಲಾಧಿಕಾರಿಗಳ ಅಥವಾ ಸರ್ಕಾರದ ಅನುಮತಿ ಪಡೆಯದೇ ಗೈರು ಹಾಜರಾಗಿರುತ್ತಾರೆ.

1. ದಿ:05.03.2003 ಮತ್ತು 06.03.2003
2. ದಿ:10.03.2003 ರಿಂದ 12.03.2003ರವರೆಗೆ
3. ದಿ:18.03.2003 ರಿಂದ 31.03.2003ರವರೆಗೆ
4. ದಿ:14.05.2003 ಮತ್ತು 16.05.2003
5. ದಿ:19.05.2003 ಮತ್ತು 20.05.2003
6. ದಿ:21.05.2003 ರಿಂದ 31.05.2003ರವರೆಗೆ
7. ದಿ:01.07.2003 ರಿಂದ 17.07.2003ರವರೆಗೆ

ಸದರಿ ಅಧಿಕಾರಿಯವರು ಮೇಲ್ಕಂಡಂತೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿ ದುರ್ನಡತೆ ಎಸಗಿ ಒಬ್ಬ ಜವಾಬ್ದಾರಿಯುತ ಸರ್ಕಾರಿ ಅಧಿಕಾರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(1)(i)(ii)(iii)ರನ್ನು ಉಲ್ಲಂಘಿಸಿರುವ ಆರೋಪದ ಬಗ್ಗೆ ಸರ್ಕಾರದ ವತಿಯಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 12ರನ್ವಯ ಮೇಲೆ(1)ರಲ್ಲಿ ಓದಲಾದ ದಿ:02.06.06ರ ನೋಟೀಸ್ ಜಾರಿ ಮಾಡಿ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಶ್ರೀ ಪ್ರದೀಪ್ ಎಸ್.ರಾಜನಾಳ್ ಅವರು ಮೇಲೆ (2)ರಲ್ಲಿ ಓದಲಾದ ತಮ್ಮ ಉತ್ತರ ಸಲ್ಲಿಸಿ ಗೈರು ಹಾಜರಿಯ ಅವಧಿಯನ್ನು ಈಗಾಗಲೇ ವೇತನರಹಿತ ರಜೆಯೆಂದು ಪರಿಗಣಿಸಿ ಈಗ ಮತ್ತೆ ಶಿಸ್ತಿನ ಕ್ರಮ ಪ್ರಾರಂಭಿಸಿದ ಬಗ್ಗೆ ಆಕ್ಷೇಪ ವ್ಯಕ್ತಪಡಿಸಿರುತ್ತಾರೆ. ಸದರಿಯವರು ಒಬ್ಬ ಜವಾಬ್ದಾರಿಯುತ ಹುದ್ದೆಯಲ್ಲಿದ್ದು, ಮಾರ್ಚ್, ಮೇ ಮತ್ತು ಜುಲೈ 2003 ತಿಂಗಳಲ್ಲಿ ಕಛೇರಿಗೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ದೃಢಪಟ್ಟಿರುವುದರಿಂದ ಇವರ ವಿರುದ್ಧ ಮಾಡಲಾದ ಅನಧಿಕೃತ ಗೈರು ಹಾಜರಿ ಆರೋಪ ಸಾಬೀತಾಗಿದೆಯೆಂದು ಪರಿಗಣಿಸಿ ಆರೋಪಿತರು ಎಸಗಿರುವ ದುರ್ನಡತೆ ಸ್ವರೂಪವನ್ನು ಮನಗಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 43 ಎಸ್ಇಎನ್ 2003 ಬೆಂಗಳೂರು ದಿನಾಂಕ:16ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಪ್ರದೀಪ್ ಎಸ್.ರಾಜನಾಳ್, ಸರ್ಕಾರದ ಜಂಟಿ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ರವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರಡಿಯಲ್ಲಿ ವಾಗ್ದಂಡನೆ (CENSURE)ಯನ್ನು ವಿಧಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಪಿ.ಆರ್. 1541

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ತುಂಗಾ ಮೇಲ್ದಂಡೆ ಯೋಜನೆ ಕಾಮಗಾರಿ ಅವ್ಯವಹಾರ - ಶ್ರೀ ವೈ.ವಿ.ನಾರಾಯಣ, ನಿವೃತ್ತ ಮುಖ್ಯ ಇಂಜಿನಿಯರ್ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ 77 ಎಸ್‌ಇಎಸ್ 04 ದಿ:30.05.05.
2. ಶ್ರೀ ವೈ.ವಿ.ನಾರಾಯಣ್, ನಿವೃತ್ತ ಮುಖ್ಯ ಇಂಜಿನಿಯರ್ ರವರ ದಿ:12.09.05ರ ಲಿಖಿತ ಉತ್ತರ.
3. ಶ್ರೀ ಸಿ.ನಾರಾಯಣ ಶೆಟ್ಟಿ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್ ರವರ ದಿ:12.01.05ರ ಲಿಖಿತ ಉತ್ತರ.
4. ಶ್ರೀ ವೈ.ಗೋಪಾಲಕೃಷ್ಣ ಗುಪ್ತ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರ ದಿ:22.08.05ರ ಲಿಖಿತ ಉತ್ತರ.
5. ಶ್ರೀ ಎಲ್.ಕೆ.ಯತಿರಾಜ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರ ದಿ:21.04.05ರಂದು ಮೃತ ಪ್ರಮಾಣ ಪತ್ರ.
6. ಶ್ರೀ ಬಿ.ಎಸ್.ಲಕ್ಷ್ಮಿಕಾಂತ್, ಸಹಾಯಕ ಇಂಜಿನಿಯರ್ ರವರ ದಿ:25.08.05ರ ಲಿಖಿತ ಉತ್ತರ.
7. ಶ್ರೀ ಎ.ವಿ.ವಿಜಯಕುಮಾರ್, ಸಹಾಯಕ ಇಂಜಿನಿಯರ್ ರವರ ದಿ:10.08.05ರ ಲಿಖಿತ ಉತ್ತರ.
8. ಶ್ರೀ ಬಿ.ಹೆಚ್.ರಂಗಸ್ವಾಮಿ, ಪ್ರಥಮ ದರ್ಜೆ ಉಗ್ರಾಣ ಪಾಲಕ ರವರ ದಿ:11.08.05ರ ಲಿಖಿತ ಉತ್ತರ.
9. ಶ್ರೀ ಎಂ.ಅಶೋಕ್ ಕುಮಾರ್, ಮುಖ್ಯ ಲೆಕ್ಕಾಧಿಕಾರಿ ರವರ ದಿ:12.09.05ರ ಲಿಖಿತ ಉತ್ತರ.
10. ಶ್ರೀ ಜಯಶಂಕರ್, ಲೆಕ್ಕಾಧಿಕಾರಿ ರವರ ದಿ:12.09.05ರ ಲಿಖಿತ ಉತ್ತರ.
11. ಅನಧಿಕೃತ ಟಿಪ್ಪಣಿ ಸಂ:ಜಸಂಇ 173 ಸೇಉವು 01(ಭಾ) ದಿ:08.08.06.

**ಪ್ರಸ್ತಾವನೆ:**

ಶ್ರೀ ವೈ.ವಿ. ನಾರಾಯಣ, ನಿವೃತ್ತ ಮುಖ್ಯ ಇಂಜಿನಿಯರ್ ರವರು ತುಂಗಾ ಮೇಲ್ದಂಡೆ ಯೋಜನೆ ವೃತ್ತ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಶಿವಮೊಗ್ಗ ದಲ್ಲಿ ದಿ:06.01.2000 ದಿಂದ 25.10.2000 ವರೆಗೆ ದಿ:13.11.2000 ದಿಂದ 06.09.2001ರವರೆಗೆ ಸೂಪರಿಂಟೆಂಡಿಂಗ್ ಇಂಜಿನಿಯರ್ ಆಗಿ ಹಾಗೂ ದಿ:01.06.2000 ದಿಂದ 05.09.2001ರವರೆಗೆ (ಪ್ರಭಾರ) ಮುಖ್ಯ ಇಂಜಿನಿಯರ್ ಆಗಿ, ಶ್ರೀ ಸಿ.ನಾರಾಯಣ ಶೆಟ್ಟಿ, ಕಾರ್ಯಪಾಲಕ ಇಂಜಿನಿಯರ್ ಆಗಿ, ಶ್ರೀ ವೈ.ಗೋಪಾಲಕೃಷ್ಣ ಗುಪ್ತ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆಗಿ, ಶ್ರೀ ಎಲ್.ಕೆ.ಯತಿರಾಜ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆಗಿ, ಶ್ರೀ ಬಿ.ಎಸ್.ಲಕ್ಷ್ಮಿಕಾಂತ್, ಸಹಾಯಕ ಇಂಜಿನಿಯರ್ ಆಗಿ, ಶ್ರೀ ಎ.ವಿ.ವಿಜಯಕುಮಾರ್, ಸಹಾಯಕ ಇಂಜಿನಿಯರ್ ಆಗಿ, ಶ್ರೀ ಬಿ.ಹೆಚ್.ರಂಗಸ್ವಾಮಿ, ಪ್ರಥಮ ದರ್ಜೆ ಉಗ್ರಾಣ ಪಾಲಕ ಆಗಿ, ಶ್ರೀ ಎಂ.ಅಶೋಕ್ ಕುಮಾರ್, ಮುಖ್ಯ ಲೆಕ್ಕಾಧಿಕಾರಿ ಆಗಿ, ಶ್ರೀ ಆರ್.ಎಸ್.ಜಯಶಂಕರ್, ಲೆಕ್ಕಾಧಿಕಾರಿ ಆಗಿ ಕಾರ್ಯನಿರ್ವಹಿಸಿದ ಅವಧಿಯಲ್ಲಿ ತುಂಗಾ ಮೇಲ್ದಂಡೆ ಯೋಜನೆ ಮುಖ್ಯ ಕಾಲುವೆಯ ಚೈ 11-35 ಕಿ.ಮೀ.ನಲ್ಲಿನ ಕಾಮಗಾರಿಯಲ್ಲಿ ನಿಯಂತ್ರಣ ಸ್ಫೋಟನದ ಹಾಗೂ ಎಸ್.ಆರ್.ಬಿ. ಐಟಂಗಳಿಗೆ ಹೆಚ್ಚಿನ ದರ ಪಾವತಿಸಿ ಕರ್ನಾಟಕ ನೀರಾವರಿ ನಿಗಮಕ್ಕೆ ರೂ.73.57ಕೋಟಿ ಹಾಗೂ ರೂ.73.60 ಲಕ್ಷಗಳು ಅಧಿಕ ವ್ಯಯವಾಗಲು ಕಾರಣರಾಗಿ ಕರ್ನಾಟಕ ಆರ್ಥಿಕ ಸಂಹಿತೆ ಅನುಚ್ಛೇದ 349 ಮತ್ತು 350 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಾವಳಿ 1966ರ ನಿಯಮ 3 (I ರಿಂದ III) ಉಲ್ಲಂಘಿಸಿದರು ಎಂಬ ಆರೋಪಕ್ಕೆ ಸಂಬಂಧಿಸಿದಂತೆ, ಮೇಲೆ(1)ರಲ್ಲಿ ಓದಲಾದ ದಿ:30.05.05ರ ನೋಟೀಸ್ ಜಾರಿ ಮಾಡಿ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು.

ಸದರಿ ನೋಟೀಸಿಗೆ ಆರೋಪಿತ ಅಧಿಕಾರಿ/ನೌಕರರು ಮೇಲೆ (2 ರಿಂದ 10)ರವರೆಗೆ ಓದಲಾದ ಲಿಖಿತ ಉತ್ತರಗಳನ್ನು ಸಲ್ಲಿಸಿರುತ್ತಾರೆ. ಶ್ರೀ ವೈ.ವಿ.ನಾರಾಯಣ ಮತ್ತು ಇತರರು ಸಲ್ಲಿಸಿದ ಉತ್ತರದಲ್ಲಿ ಪ್ರಸ್ತುತ ಪ್ರಕರಣದಲ್ಲಿ ತಾವು ತಪ್ಪಿತಸ್ಥರಲ್ಲ, ನಿಯಮದಂತೆ ತಾವು ಕರ್ತವ್ಯ ನಿರ್ವಹಿಸಿದ್ದೇವೆ, ತಮ್ಮ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸಬೇಕೆಂದು ಕೋರಿರುತ್ತಾರೆ. ಆರೋಪಿತರ ಪೈಕಿ ಶ್ರೀ ಎಲ್.ಪಿ.ಯತಿರಾಜ್, ಎ.ಇ.ಇ. ರವರು ದಿ:21.04.05ರಂದು ನಿಧನ ಹೊಂದಿರುತ್ತಾರೆ ಎಂದು ವರದಿ ಮಾಡಲಾಗಿದೆ. ಆರೋಪಿತರು ಸಲ್ಲಿಸಿದ ಉತ್ತರಗಳ ಹಿನ್ನೆಲೆಯಲ್ಲಿ ವಿಚಾರಣೆಯನ್ನು ಮುಂದುವರಿಸುವ ಅಥವಾ ಕೈಬಿಡುವ ಕುರಿತು ಜಲ ಸಂಪನ್ಮೂಲ ಇಲಾಖೆಯ ಅಭಿಪ್ರಾಯ ಕೋರಲಾಯಿತು. ಮೇಲೆ (11)ರಲ್ಲಿ ಓದಲಾದ ದಿ:08.08.06ರ ಅನಧಿಕೃತ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆಯ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ರವರು ನೀಡಿದ ಅಭಿಪ್ರಾಯ ಮತ್ತು ಕಾಮಗಾರಿಯಲ್ಲಿ ಅಳವಡಿಸಿದ ಕರಾರನ್ನು ಪರಿಶೀಲಿಸಲಾಗಿ ಟೆಂಡರ್ ಕರಾರಿನ ಪ್ರಕಾರ ಕ್ಲಾಸ್ 13(ಸಿ) ಮತ್ತು (ಡಿ)ನಲ್ಲಿ ಮೂಲ ಅಂದಾಜು ಪಟ್ಟಿಯಲ್ಲಿ ಸೇರಿಲ್ಲದಿರುವ ಐಟಂಗಳ ಬಗ್ಗೆ ದರಗಳನ್ನು ನಿಗಧಿಪಡಿಸುವ ಕುರಿತು ಸಂಬಂಧಪಟ್ಟ ಕಾರ್ಯಪಾಲಕ ಇಂಜಿನಿಯರ್ ಹಾಗೂ ಅಧೀಕ್ಷಕ ಇಂಜಿನಿಯರ್‌ಗಳಿಗೆ ಅವಕಾಶ ಕಲ್ಪಿಸಲಾಗಿದ್ದು ಅದರನ್ವಯ ಪ್ರಸ್ತಾಪಿತ ಬಾಬ್ತುಗಳಿಗೆ ದರಗಳನ್ನು ನಿಗಧಿಪಡಿಸಿರುವುದು ಕಂಡು ಬರುತ್ತದೆ. ಪ್ರಸ್ತಾಪಿತ ವಿಷಯದಲ್ಲಿ ಅಡ್ವೋಕೇಟ್ ಜನರಲ್ ಹಾಗೂ

ನಿಗಮದ ಮಂಡಳಿಯು ಸೂಕ್ತ ರೀತಿಯಲ್ಲಿ ತೀರ್ಮಾನ ತೆಗೆದುಕೊಂಡಿರುವುದು ಸರಿ ಇರುವುದರಿಂದ ಸದರಿ ಪ್ರಕರಣದಲ್ಲಿ 9 ಜನ ಅಧಿಕಾರಿ/ನೌಕರರ ಮೇಲಿರುವ ಆರೋಪವನ್ನು ಕೈಬಿಡುವಂತೆ ಕೋರಿರುತ್ತದೆ.

ಮೇಲ್ಕಂಡ ಜಲಸಂಪನ್ಮೂಲ ಇಲಾಖೆಯ ಅಭಿಪ್ರಾಯ ಮತ್ತು ತತ್ಸಂಬಂಧ ವಾಸ್ತವಾಂಶಗಳನ್ನು ಪರಿಶೀಲಿಸಿದ ಶಿಸ್ತು ಪ್ರಾಧಿಕಾರವು ಜಲಸಂಪನ್ಮೂಲ ಇಲಾಖೆ ಕರ್ನಾಟಕ ನೀರಾವರಿ ನಿಗಮದ ಅಭಿಪ್ರಾಯವನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 77 ಎಸ್‌ಇಎನ್ 2004 ಬೆಂಗಳೂರು ದಿನಾಂಕ:19ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ,

1. ಶ್ರೀ ವೈ.ವಿ.ನಾರಾಯಣ್, ನಿವೃತ್ತ ಮುಖ್ಯ ಇಂಜಿನಿಯರ್
2. ಶ್ರೀ ಸಿ.ನಾರಾಯಣ ಶೆಟ್ಟಿ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್
3. ಶ್ರೀ ವೈ.ಗೋಪಾಲಕೃಷ್ಣ ಗುಪ್ತ, ಸಹಾಯಕ ಕಾರ್ಯಪಾಲಕ ಇಂಜಿನಿಯರ್
4. ಶ್ರೀ ಎಲ್.ಕೆ.ಯತಿರಾಜ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್
5. ಶ್ರೀ ಬಿ.ಎನ್.ಲಕ್ಷ್ಮಿಕಾಂತ್, ಸಹಾಯಕ ಇಂಜಿನಿಯರ್
6. ಶ್ರೀ ಎ.ವಿ.ವಿಜಯಕುಮಾರ್, ಸಹಾಯಕ ಇಂಜಿನಿಯರ್
7. ಶ್ರೀ ಬಿ.ಹೆಚ್.ರಂಗಸ್ವಾಮಿ, ಪ್ರಥಮ ದರ್ಜೆ ಉಗ್ರಾಣ ಪಾಲಕ
8. ಶ್ರೀ ಎಂ.ಅಶೋಕ್ ಕುಮಾರ್, ಮುಖ್ಯ ಲೆಕ್ಕಾಧಿಕಾರಿ
9. ಶ್ರೀ ಜಯಶಂಕರ್, ಲೆಕ್ಕಾಧಿಕಾರಿ

ರವರುಗಳ ವಿರುದ್ಧ ದಿನಾಂಕ:30.05.05ರ ಸರ್ಕಾರದ ನೋಟೀಸಿನಲ್ಲಿ ಮಾಡಲಾದ ದೋಷಾರೋಪಣೆಗಳಿಂದ ಅವರುಗಳನ್ನು ಆರೋಪಮುಕ್ತರನ್ನಾಗಿಸಿ ಆದೇಶಿಸಿದೆ.

ಈ ವಿಚಾರಣೆಯ ಪ್ರಕ್ರಿಯೆ ನಡೆಯದಿದ್ದಲ್ಲಿ ಆರೋಪಿತ ಅಧಿಕಾರಿ/ನೌಕರರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 1542

**ವಿಷಯ:** ಶ್ರೀ ಡಿ.ಜಗನ್ನಾಥರಾವ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ (ಡಿ.ಎಸ್.ಇ.ಆರ್.ಟಿ) ಅವರ ವಿರುದ್ಧ ಇಲಾಖಾ ವಿಚಾರಣೆ- ಆರೋಪಮುಕ್ತರನ್ನಾಗಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ 158 ಎಸ್‌ಇಎನ್ 04 ದಿನಾಂಕ:21.03.06.
2. ಶ್ರೀ ಡಿ.ಜಗನ್ನಾಥರಾವ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರ ದಿನಾಂಕ: 19.04.06ರ ಲಿಖಿತ ಉತ್ತರ.
3. ಅನಧಿಕೃತ ಟಿಪ್ಪಣಿ ಸಂಖ್ಯೆ:ಇಡಿ 146 ಡಿಜಿಡಿ 99 ದಿನಾಂಕ:03.05.06 ಮತ್ತು 17.06.06.

**ಪ್ರಸ್ತಾವನೆ:**

ಶ್ರೀ ಡಿ.ಜಗನ್ನಾಥರಾವ್, ನಿವೃತ್ತ ನಿರ್ದೇಶಕರು, ಡಿ.ಎಸ್.ಇ.ಆರ್.ಟಿ., ಬೆಂಗಳೂರು ಇವರು 91-92ನೇ ಸಾಲಿನಲ್ಲಿ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೀದರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸರ್ಕಾರದ ಆರ್ಥಿಕ ಮಿತವ್ಯಯ ಆದೇಶವನ್ನು ಉಲ್ಲಂಘಿಸಿ 8 ಶಿಕ್ಷಕರ ಹಾಗೂ 5 ಬೋಧಕೇತರ ಸಿಬ್ಬಂದಿಗಳ ನೇಮಕಾತಿಯನ್ನು ಅನುಮೋದಿಸಿ 5 ಇತರ ಸಿಬ್ಬಂದಿಯ ವೇತನವನ್ನು ನಿಯಮಗಳ ವಿರುದ್ಧ ಬಿಡುಗಡೆ ಮಾಡಿ ಸರ್ಕಾರಕ್ಕೆ ಹಣಕಾಸಿನ ಹೊರೆ ಹೆಚ್ಚಾಗಲು ಕಾರಣರಾದ ಆರೋಪ ಹಾಗೂ ಪರಿಶಿಷ್ಟ ಜಾತಿ/ಪಂಗಡದ ಅನುದಾನಿತ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳಲ್ಲಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಯ ಶೇಕಡ 50 ಹಾಗೂ ವಿದ್ಯಾರ್ಥಿಗಳ ಸಂಖ್ಯೆಯ ಶೇಕಡ 50 ಪರಿಶಿಷ್ಟ ಜಾತಿ/ಪಂಗಡಕ್ಕೆ ಸೇರಿರಬೇಕೆಂಬ ಕಡ್ಡಾಯ ನಿಯಮವಿದ್ದರೂ ಅದನ್ನು ಕಡೆಗಣಿಸಿ ಶೇಕಡ 50 ಪರಿಶಿಷ್ಟ ಜಾತಿ/ಪಂಗಡದ ಅನುಪಾತ ಕಾಯ್ದುಕೊಳ್ಳದ ಪ್ರಾಥಮಿಕ ಶಾಲೆಯಲ್ಲಿನ 1 ಹಾಗೂ ಪ್ರೌಢ ಶಾಲೆಯಲ್ಲಿನ 3 ಪರಿಶಿಷ್ಟ ಜಾತಿ/ಪಂಗಡಕ್ಕೆ ಸೇರಿರದ ಸಿಬ್ಬಂದಿಯ ನೇಮಕಾತಿಯನ್ನು ಅನುಮೋದಿಸಿ ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗಿದ ಆರೋಪಗಳಿಗೆ ಸಂಬಂಧಿಸಿದಂತೆ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿ:21.03.06ರ ನೋಟೀಸ್ ನೀಡಿ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು.

ಈ ಬಗ್ಗೆ ಆರೋಪಿತ ಅಧಿಕಾರಿಯಾದ ಶ್ರೀ ಡಿ.ಜಗನ್ನಾಥರಾವ್ ರವರು ಮೇಲೆ (2)ರಲ್ಲಿ ಓದಲಾದ ದಿ:19.04.06ರ ಲಿಖಿತ ಉತ್ತರ ನೀಡಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ದಿ:28.09.91ರ ಮಾರ್ಗಸೂಚಿಯ ಅನುಸಾರ ಹಾಗೂ ಬೀದರ್ ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯದರ್ಶಿಯವರ ಅನುಮೋದನೆ ಪಡೆದು ಶಿಕ್ಷಕರ ಹಾಗೂ ಶಿಕ್ಷಕೇತರ ಸಿಬ್ಬಂದಿಯನ್ನು ನೇಮಕಾತಿ ಮಾಡಲಾಗಿದೆ ಎಂದು ಹಾಗೂ 2ನೇ ಆರೋಪದ ಬಗ್ಗೆ 01.06.92ರ ತನಕ ಮಾಡಲಾದ ನೇಮಕಾತಿಗಳು 22.01.96ರ ಸುತ್ತೋಲೆ ಅನುಸಾರ ಸಕ್ರಮಗೊಳಿಸಲ್ಪಟ್ಟಿದೆ ಎಂದು ತಿಳಿಸಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆರೋಪಿತ ಅಧಿಕಾರಿಯವರ ವಿರುದ್ಧದ ಆರೋಪ ಪಟ್ಟಿ ಹಾಗೂ ಅವರ ರಕ್ಷಣಾತ್ಮಕ ಹೇಳಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ವಿಚಾರಣೆ ಮುಂದುವರೆಸಬೇಕೇ ಅಥವಾ ಬೇಡವೇ ಎಂಬುದಕ್ಕೆ ಶಿಕ್ಷಣ ಇಲಾಖೆಯಿಂದ ಮಾಹಿತಿ ಕೋರಲಾಗಿತ್ತು.

ಈ ಬಗ್ಗೆ ಮೇಲೆ (3)ರಲ್ಲಿ ಶಿಕ್ಷಣ ಇಲಾಖೆಯು ಶ್ರೀ ಡಿ.ಜಗನ್ನಾಥರಾವ್ ರವರು ತಮ್ಮ ರಕ್ಷಣಾತ್ಮಕ ಹೇಳಿಕೆಯಲ್ಲಿ ನೀಡಿರುವ ಅಂಶಗಳನ್ನು ಹಾಗೂ ಮುಖ್ಯವಾಗಿ ಇಲಾಖೆಯಲ್ಲಿ ಅವರು 33 ವರ್ಷಗಳಿಂದ ಸಲ್ಲಿಸಿರುವ ಶ್ಲಾಘನೀಯ ಸೇವೆಯನ್ನು ಪರಿಗಣಿಸಿ ಅವರ ಹೇಳಿಕೆಯನ್ನು ಒಪ್ಪಬಹುದೆಂದು ಮತ್ತು ಸರ್ವೋಚ್ಚ ನ್ಯಾಯಾಲಯ ಘಟನೆ ನಡೆದ 12 ವರ್ಷಗಳ ನಂತರ ಇಲಾಖಾ ವಿಚಾರಣೆ ಪ್ರಾರಂಭಿಸಿದ ಪ್ರಕರಣದ ತೀರ್ಪಿನ ಹಿನ್ನೆಲೆಯಲ್ಲಿ ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಡಬಹುದೆಂದು ಶಿಫಾರಸ್ಸು ಮಾಡಿದೆ. ಆದುದರಿಂದ ಶಿಕ್ಷಣ ಇಲಾಖೆಯ ಅಭಿಪ್ರಾಯವನ್ನು ಒಪ್ಪಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 158 ಎಸ್ಇಎನ್ 04 ಬೆಂಗಳೂರು ದಿನಾಂಕ:19ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಶ್ರೀ ಡಿ.ಜಗನ್ನಾಥರಾವ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ (ಡಿ.ಎಸ್.ಇ.ಆರ್.ಟಿ.), ಬೆಂಗಳೂರು ಅವರ ವಿರುದ್ಧ ದಿನಾಂಕ:21.03.06ರ ಸರ್ಕಾರದ ನೋಟೀಸಿನಲ್ಲಿ ಮಾಡಲಾದ ದೋಷಾರೋಪಣೆಗಳಿಂದ ಅವರನ್ನು ಆರೋಪಮುಕ್ತರನ್ನಾಗಿಸಿ ಆದೇಶಿಸಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಡಿ.ಜಗನ್ನಾಥರಾವ್ ರವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ,**

ಪಿ.ಆರ್. 1543

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3).

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ಸರ್ಕಾರಿ ಆದೇಶ ಸಂಖ್ಯೆ. ಮಮಇ 180 ಎಸ್‌ಜೆಡಿ 2006 ಬೆಂಗಳೂರು, ದಿನಾಂಕ: 26ನೇ ಅಕ್ಟೋಬರ್ 2006.**

**ವಿಷಯ:–** ಡಾ:ಅನ್ನಪೂರ್ಣ, ಪರಿವೀಕ್ಷಣಾಧಿಕಾರಿ ದರ್ಜೆ–1 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರನ್ನು ಆಡಳಿತಾಧಿಕಾರಿ, ಬಾಲಭವನಹುದ್ದೆಗೆ ನಿಯೋಜಿಸಿರುವ ಕುರಿತು ಷರತ್ತು ಮತ್ತು ನಿಬಂಧನೆಗಳನ್ನು ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:–** ಅಧಿಸೂಚನೆ ಸಂಖ್ಯೆ.ಮಮಇ 22 ರಾಮಅ 2005 ದಿನಾಂಕ:25–6–2005

ಶ್ರೀಮತಿ ಡಾ:ಅನ್ನಪೂರ್ಣ, ಪರಿವೀಕ್ಷಣಾಧಿಕಾರಿ ದರ್ಜೆ–1, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಸದರಿ ಹುದ್ದೆಯಲ್ಲಿ ಕೆ.ಸಿ.ಎಸ್.ಆರ್.ನಿಯಮ 32 ರನ್ವಯ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದು ಇವರನ್ನು ಮೇಲೆ ಓದಲಾದ ಅಧಿಸೂಚನೆಯಲ್ಲಿ ಆಡಳಿತಾಧಿಕಾರಿ, ಬಾಲಭವನ ಸೊಸೈಟಿ ಹುದ್ದೆಗೆ ನಿಯೋಜಿಸಿದ್ದು, ಇವರ ನಿಯೋಜನೆ ಷರತ್ತು ಮತ್ತು ನಿಬಂಧನೆಗಳನ್ನು ಈ ಕೆಳಕಂಡಂತೆ ಇರುತ್ತವೆ.

**1)ನಿಯೋಜನೆಯ ಅವಧಿ**

ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭಿಕ ಅವಧಿಯು ದಿನಾಂಕ:29–6–2005 ರಿಂದ 3 ವರ್ಷದವರೆಗೆ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

**2)ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭ ಮತ್ತು ಮುಕ್ತಾಯದ ಅವಧಿ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯು ಅಧಿಕಾರಿಯವರ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಅಂದರೆ ದಿನಾಂಕ:29–6–2005 ರಿಂದ ಪ್ರಾರಂಭವಾಗಿದ್ದು ಮತ್ತು ನಿಯೋಜನಾವಧಿ ಅಂತ್ಯಗೊಂಡು ನೇಮಕ ಮಾಡಿದ ಹುದ್ದೆಯ ಕಾರ್ಯಭಾರ ವಹಿಸಿಕೊಟ್ಟ ದಿನಾಂಕದಿಂದ ಮುಕ್ತಾಯಗೊಳ್ಳುವುದು.

**3)ವೇತನ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯಲ್ಲಿ ಇವರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ವೇತನವನ್ನು ಪಡೆಯುತ್ತಾರೆ ಮತ್ತು 200ರೂ.ಗಳ ಗರಿಷ್ಠ ಮಿತಿಗೊಳಪಟ್ಟು, ಆ ವೇತನ ಶ್ರೇಣಿಯ ಸರಾಸರಿಯ ಶೇ.5ರ ದರದಲ್ಲಿ ಅನ್ಯಸೇವಾ ಭತ್ಯೆಯನ್ನು (ಎಫ್.ಎಸ್.ಎ) ಸಹ ಪಡೆಯುತ್ತಾರೆ.

**4)ತುಟ್ಟಿ ಭತ್ಯೆ:**

ಮನೆ ಬಾಡಿಗೆ ಭತ್ಯೆ: ನಗರ ಪರಿಹಾರ ಭತ್ಯೆ ಪಾವತಿಯು ರಾಜ್ಯ ಸರ್ಕಾರದ ನಿಯಮಗಳಡಿಯಲ್ಲಿ ನಿಬಂಧಿಸಲಾಗುವುದು.

**5)ಸೇರುವ ಕಾಲ:** ಸೇರುವ ಕಾಲದ ವೇತನ ಮತ್ತು ವರ್ಗಾವಣೆ ಪ್ರಯಾಣ ಭತ್ಯೆ ಇವುಗಳನ್ನು ನಿಯೋಜನೆ ಮೇಲೆ ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರ ನಿಯಮಗಳ ಆದೇಶಗಳಡಿಯಲ್ಲಿ ಕ್ರಮಗೊಳಿಸಲಾಗುವುದು ಮತ್ತು ಇವುಗಳನ್ನು ನಿಯೋಜಕರು ಪಾವತಿ ಮಾಡತಕ್ಕದ್ದು.

**6)ಪ್ರಯಾಣ ಭತ್ಯೆ:**

ನಿಯೋಜನೆ ಮೇಲೆ ಅನ್ಯಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನಿಯೋಜಕರಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಅಧಿಕಾರಿ ಅರ್ಹರಾಗಿರುತ್ತಾರೆ.

**7)ರಜೆ ನಿಯಮಗಳು:–**

ರಾಜ್ಯ ಸರ್ಕಾರದಲ್ಲಿ ಅಧಿಕಾರಿಗೆ ಅನ್ವಯವಾಗುವ ರಜಾ ನಿಯಮಗಳಿಗೆ ಒಳಪಟ್ಟಿರುತ್ತಾರೆ.

**8)ರಜೆ ಪ್ರಯಾಣ ರಿಯಾಯಿತಿ:**

ರಾಜ್ಯ ಸರ್ಕಾರದಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಸ್ವಗ್ರಾಮ ಪ್ರಯಾಣಕ್ಕೆ ರಜೆ ಪ್ರಯಾಣ ರಿಯಾಯಿತಿಯನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ.

**9)ಗಳಿಕೆ ರಜೆ ನಗದೀಕರಣ:–**

ಕರ್ನಾಟಕ ನಾಗರೀಕರ ಸೇವಾ ನಿಯಮಗಳ 'ಸಿ' ಅನುಬಂಧದಲ್ಲಿರುವ ನಿಯಮಗಳ ಪ್ರಕಾರ ಗಳಿಕೆ ರಜೆ ನಗದೀಕರಣ ಸೌಲಭ್ಯಕ್ಕೆ ಅಧಿಕಾರಿ ಅರ್ಹರಾಗಿರುತ್ತಾರೆ.

**10)ವೈದ್ಯಕೀಯ ರಿಯಾಯಿತಿಗಳು:–**

1963ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಉಪಚಾರ)ನಿಯಮಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳಿಗೆ ಕಡಿಮೆಯಿಲ್ಲದಂತೆ ಸೌಲಭ್ಯಗಳನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ ಮತ್ತು ಅದರ ಬಾಬ್ತಿನ ವೆಚ್ಚವನ್ನು ನಿಯೋಜಕರೇ ಭರಿಸತಕ್ಕದ್ದು.

**11)ದುರ್ಬಲತೆ ರಜೆ:–**

ನಿಯೋಜಕರ ಬಳಿ ಸೇವೆಯಲ್ಲಿರುವಾಗ ಅಥವಾ ಸೇವೆಯ ಮೂಲಕ ಸಂಭವಿಸುವ ದುರ್ಬಲತೆಗೆ ಸಂಬಂಧಿಸಿದಂತೆ ಮಂಜೂರಾದ ದುರ್ಬಲತೆ ರಜೆಗೆ ಇಂತಹ ದುರ್ಬಲತೆಯು ನಿಯೋಜಕರ ಬಳಿಯಲ್ಲಿನ ಸೇವೆಯು ಕೊನೆಗೊಂಡ ನಂತರ ಕಂಡುಬಂದರೂ ಸಂಬಂಧಿಸಿದ ರಜೆ ವೇತನವನ್ನು ಪಾವತಿ ಮಾಡಲು ಅನ್ಯನಿಯೋಜಕರು ಬದ್ಧರಾಗಿರುತ್ತಾರೆ.

**12)ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನ:–**

(ಅ) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ನಿಯೋಜಕರು ಈ ಮುಂದಿನ ದರಗಳಲ್ಲಿ ಪಾವತಿ ಮಾಡತಕ್ಕದ್ದು.

(1) **ರಜೆ ವೇತನ ಅಂಶದಾನ:** ಅನ್ಯಸೇವೆಯ ಅವಧಿಯಲ್ಲಿ ಅನ್ಯಸೇವಾ ಭತ್ಯೆಯೂ ಸೇರಿದಂತೆ, ಪಡೆಯುವ ಸಂಬಳದ ಶೇ 11 ರಷ್ಟು.

(2) **ನಿವೃತ್ತಿ ವೇತನ ಅಂಶದಾನ :** ಕಾಲ ಕಾಲಕ್ಕೆ ಪಡೆಯುವ ವೇತನದ 8ನೇ ಒಂದು ಭಾಗ ಉದ್ದೇಶಕ್ಕೆ ವೇತನ–ಎಂದರೆ ಸರ್ಕಾರಿ ಆದೇಶ ಸಂ.ಎಫ್‌ಡಿ 37 ಎಸ್‌ಆರ್‌ಎಸ್ 87, ದಿನಾಂಕ:11–2–88ರಲ್ಲಿ ವಿವರಿಸಲಾದ ವೇತನ ಎಂದರ್ಥ.

ಅ)ನಿಯೋಜಕರು ವಾರ್ಷಿಕವಾಗಿ ಪ್ರತಿ ಆರ್ಥಿಕ ವರ್ಷ ಕೊನೆಗೊಂಡ 15 ದಿನಗಳೊಳಗೆ ಅಥವಾ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಅನ್ಯಸೇವೆಯು ಮುಗಿದು ಹೋದಂದಿನಿಂದ ರಜೆಯ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪ್ರತ್ಯೇಕವಾಗಿ ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಸಂದಾಯ ಮಾಡತಕ್ಕದ್ದು.

ಆ)ರಜೆ ವೇತನ 1)ಅಖಿಲ ಭಾರತ ಸೇವೆಯ 0070 ಇತರೆ ಆಡಳಿತ ಸೇವೆಗಳು–60–ಇತರೆ ಸೇವೆಗಳು 800– ಅಧಿಕಾರಿಗಳ ಪ್ರಕರಣದಲ್ಲಿ ಇತರೆ ಜಮೆಗಳು 13 ಅಖಿಲ ಭಾರತ ಸೇವೆಯ ಅಧಿಕಾರಿಗಳಿಗೆ ಸಂಬಂಧಿಸಿದ ರಜೆ ವೇತನ ಅಂಶದಾನ

2)ಇತರ ಪ್ರಕರಣದಲ್ಲಿ

| | |
|---|---|
| ಎ) ಕೃತ್ಯ ಸಂಬಂಧದ ಜಮೆ ಶೀರ್ಷಿಕೆ ಇದ್ದಲ್ಲಿ | ಸಿಬ್ಬಂದಿಗೆ ಅನ್ವಯಿಸುವ ವೆಚ್ಚ ಶೀರ್ಷಿಕೆಗೆ ಅನುಗುಣವಾದ ಕೃತ್ಯ |
| ಬಿ) ಸರಿಹೊಂದುವ ಜಮೆ ಶೀರ್ಷಿಕೆ ಇಲ್ಲದೇ ಹೋದಲ್ಲಿ | ಸಂಬಂಧದ ಶೀರ್ಷಿಕೆ 800 ಇತರೆ ಜಮೆಗಳು –ರಜೆ ವೇತನದ ಅಂಶದಾನ |
| 1) ಸಾಮಾನ್ಯ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0075 ಇತರೆ ಸಾಮಾನ್ಯ ಸೇವೆಗಳು 800 ಇತರೆ ಜಮೆಗಳು–ರಜೆ ವೇತನ ಅಂಶದಾನ |
| 2) ಸಾಮಾನ್ಯ ಮತ್ತು ಸಾಮುದಾಯಿಕ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0250 ಇತರೆ ಸಾಮಾಜಿಕ ಸೇವೆಗಳು– 800 ಇತರೆ ಜಮೆಗಳು ರಜೆ ವೇತನ ಅಂಶದಾನ |
| 3) ಆರ್ಥಿಕ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 1475 ಇತರೆ ಸಾಮಾನ್ಯ ಆರ್ಥಿಕ ಸೇವೆಗಳು–800 ಇತರೆ ಜಮೆಗಳು ರಜೆ ವೇತನದ ಅಂಶದಾನ. |

ಸಿ)ನಿವೃತ್ತಿ ವೇತನ ಅಂಶದಾನ : 0071 ನಿವೃತ್ತಿ ವೇತನ ಮತ್ತು ಇತರ ನಿವೃತ್ತಿ ಸೌಲಭ್ಯಗಳ ಅಂಶದಾನ ಮತ್ತು ವಸೂಲಿಗಳು 101.ಚಂದಾಗಳು ಮತ್ತು ಅಂಶದಾನಗಳು– 03.ನಿವೃತ್ತಿ ವೇತನ ವೆಚ್ಚದ ಬಗ್ಗೆ ವಾಣಿಜ್ಯ ಇಲಾಖೆಗಳಿಂದ ವಸೂಲು ಮಾಡಲಾದ ಅಂಶದಾನ ಅಥವಾ 06 ನಿವೃತ್ತ ವೇತನದ ವೆಚ್ಚದ ಸಲುವಾಗಿ ಸ್ಥಳೀಯ ಸಂಸ್ಥೆಗಳಿಂದ ವಸೂಲು ಮಾಡಿದ ಅಂಶದಾನ.

(ಡಿ) ಮೇಲಿನ ಅವಧಿಯೊಳಗೆ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪಾವತಿ ಮಾಡದಿದ್ದರೆ, ಸರ್ಕಾರ ವಿಶೇಷವಾಗಿ ವಿನಾಯಿತಿ ತೋರಿಸಿದ ಹೊರತು, ಪಾವತಿ ಮಾಡದಿರುವ ಅಂಶದಾನದ ಮೇಲೆ, ಮೇಲಿನ ಅವಧಿಯು

ಮುಕ್ತಾಯಗೊಂಡ ದಿನಾಂಕದಿಂದ ಅಂಶದಾನವನ್ನು ಅಂತಿಮವಾಗಿ ಪಾವತಿ ಮಾಡುವ ದಿನಾಂಕದವರೆಗೆ ಪ್ರತಿ 100 ರೂ.ಗಳಿಗೆ ದಿನಂಪ್ರತಿ 2 ಪೈಸೆ ದರದಲ್ಲಿ ಬಡ್ಡಿಯನ್ನು ನಿಯೋಜಕರು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

(ಈ)ರಜೆ ವೇತನ ಮತ್ತು ನಿವೃತ್ತಿ ವೇತನ ವಂತಿಕೆಗಳನ್ನು ಬಾಲಭವನ ಸೊಸೈಟಿ, ಬೆಂಗಳೂರು– ಇವರಿಂದ ಮಹಾಲೇಖಪಾಲರು(ಎ ಅಂಡ್ ಇ) ಕರ್ನಾಟಕ, ಬೆಂಗಳೂರು. ಇವರಿಗೆ ತಪ್ಪದೇ ಕ್ರಾಸ್ ಮಾಡಿದ ಚೆಕ್: ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿ ಮಾಡತಕ್ಕದ್ದು, ಮತ್ತು ಅದನ್ನು ನಗದು ರೂಪದಲ್ಲಿ ಸಂದಾಯ ಮಾಡತಕ್ಕದ್ದು ಮತ್ತು ಅದನ್ನು ನಗದು ರೂಪದಲ್ಲಿ ಸಂದಾಯ ಮಾಡತಕ್ಕದ್ದಲ್ಲ. ಅಂತಹ ನಗದು ರೂಪದಲ್ಲಿ ಸಂದಾಯ ಚೆಕ್: ಡಿಮ್ಯಾಂಡ್ ಡ್ರಾಫ್ಟ್ ಮಹಾಲೇಖಪಾಲರ ಕಛೇರಿಯಲ್ಲಿ ಸ್ವೀಕೃತವಾದ ದಿನಾಂಕವನ್ನು ವಂತಿಕೆಯ ಹೊಣೆಯಿಂದ ವಿಮುಕ್ತಿ ಪಡೆದ ದಿನಾಂಕವೆಂದು ಪರಿಗಣಿಸತಕ್ಕದಾದ್ದರಿಂದ, ಚೆಕ್ :ಡಿಮ್ಯಾಂಡ್ ಡ್ರಾಫ್ಟನ್ನು ನಿಗದಿಪಡಿಸಿದ ದಿನಾಂಕದೊಳಗಾಗಿ ಮಹಾಲೇಖಪಾಲರ ಕಛೇರಿ (ಎ ಅಂಡ್ ಇ) ಕರ್ನಾಟಕ, ಬೆಂಗಳೂರು ಇವರಿಗೆ ತಲುಪುವಂತೆ ಕಳುಹಿಸತಕ್ಕದ್ದು.

(ಎಫ್) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳ ವಂತಿಕೆ ಮತ್ತು ಅವುಗಳ ಮೇಲೆ ಬಡ್ಡಿಯಿದ್ದರೆ, ಅಂತಹ ಬಡ್ಡಿಗಳನ್ನು ಅತ್ಯಂತ ದತ್ತಿದರ ರೂಪಾಯಿಗೆ ಸರಿಹೊಂದಿಸತಕ್ಕದ್ದು.

**(13) ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆ:–** ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಗೆ ಸಂಬಂಧಿಸಿದ ಮಾಸಿಕ ವಂತಿಕೆಯನ್ನು ಅಧಿಕಾರಿಯವರ ವೇತನದಿಂದ ವಸೂಲು ಮಾಡಲು ಮತ್ತು ಅದನ್ನು 1981ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಯ ಅನುಬಂಧ–ಎ ದಲ್ಲಿನ ಅನುಸೂಚಿಯೊಂದಿಗೆ ಇಲಾಖಾ ಮುಖ್ಯಸ್ಥರ ಹೆಸರಿಗೆ ಕ್ರಾಸ್ ಮಾಡಿದ ಚೆಕ್; ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಸಂಬಂಧಿತ ಲೆಕ್ಕ ಶೀರ್ಷಿಕೆಗೆ ಜಮಾ ಮಾಡಲು ಕಳುಹಿಸತಕ್ಕದ್ದು.

**14)ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ವಿಮಾ ಪತ್ರ:–** ಸಾಮಾನ್ಯ ಭವಿಷ್ಯ ನಿಧಿಗೆ ಚಂದಾ ಅನ್ಯಸೇವೆಯ ಮೇಲೆ ಪ್ರತಿ ನಿಯೋಜನೆ ಹೋಗುವ ಸಮಯದಲ್ಲಿ ಕೆ.ಜಿ.ಐ.ಡಿ ನಿಯಮಾವಳಿ: ಜಿ.ಪಿ.ಎಫ್. ನಿಯಮಾವಳಿ ಪ್ರಕಾರ ಚಂದಾ ನೀಡುತ್ತಿದ್ದ ಕೆ.ಜಿ.ಐ.ಡಿ : ಜಿ.ಪಿ.ಎಫ್. ನಲ್ಲಿನ ವಿಮಾ ಪತ್ರಗಳಿಗೆ ಚಂದಾ ನೀಡುವುದನ್ನು ಅಧಿಕಾರಿ ಮುಂದುವರೆಸುತ್ತಾರೆ. ಅಧಿಕಾರಿಯವರ ಸಂಬಳದಿಂದ ಚಂದಾಗಳನ್ನು ವಸೂಲು ಮಾಡತಕ್ಕದ್ದು ಮತ್ತು ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಜಮಾ ಮಾಡತಕ್ಕದ್ದು.

| | | |
|---|---|---|
| ಸಾಮಾನ್ಯ ಭವಿಷ್ಯ ನಿಧಿ | : | 8005.ರಾಜ್ಯ ಭವಿಷ್ಯ ನಿಧಿ |
| ಕರ್ನಾಟಕ ಸರ್ಕಾರಿ ವಿಮಾ ಇಲಾಖೆ | : | 8011 ವಿಮೆ ಮತ್ತು ನಿವೃತ್ತಿ ವೇತನ ನಿಧಿಗಳು–1 ಜಮೆ ನಿಧಿಗಳು. |

**15)ಬೋನಸ್ ಅಥವಾ ಅನುಗ್ರಹ ಕೊಡುಗೆ ಪಾವತಿ:–**

ಸರ್ಕಾರಿ ಕಂಪನಿ, ಮಂಡಳಿ, ನಿಗಮ ಇತ್ಯಾದಿಗಳಿಗೆ ನಿಯೋಜಕರಾಗಿ ಮಾಸಿಕ ಎರಡು ಸಾವಿರದ ಐದುನೂರು ರೂಪಾಯಿಗಳಿಗೆ ಮೀರದೆ ಸಂಬಳವನ್ನು ಪಡೆಯುತ್ತಿರುವ ಅಧಿಕಾರಿಗೆ ಉದ್ದಿಮೆಯು 1965 ರ ಬೋನಸ್ ಸಂದಾಯ ಅಧಿನಿಯಮಗಳ ಪ್ರಕಾರ ಅನುಗ್ರಹ ಕೊಡುಗೆ ನೀಡಿದಲ್ಲಿ ಬೋನಸ್ ಅಥವಾ ಅನುಗ್ರಹ ಕೊಡುಗೆಯನ್ನು ಪಡೆಯಲು ಅನುಮತಿಸತಕ್ಕದ್ದು.

**16)ಬಡ್ತಿ ಅಥವಾ ವರ್ಗಾವಣೆ ಅಥವಾ ಪ್ರಭಾರ:–**

ಅಧಿಕಾರಿಯವರಿಗೆ ಬಡ್ತಿ ನೀಡುವುದು ಅಥವಾ ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆಯನ್ನು ನೀಡುವುದು ಅಥವಾ ಸೌಲಭ್ಯವನ್ನು ಒದಗಿಸುವುದು ಇವುಗಳನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಮಾಡತಕ್ಕದ್ದಲ್ಲ.

**17)ಗೃಹ ನಿರ್ಮಾಣ ಮುಂಗಡ: ಗೃಹ ಖರೀದಿ ಮುಂಗಡ :ಗೃಹ ರಿಪೇರಿ ಮುಂಗಡ ಮತ್ತು ವಾಹನ ಖರೀದಿ ಮುಂಗಡ:–**

ನಿಯೋಜಕರು, ಪ್ರಸ್ತುತ, ಮುಂಗಡಗಳನ್ನು ಅಧಿಕಾರಿಯವರಿಗೆ ಮಂಜೂರು ಮಾಡತಕ್ಕದ್ದಲ್ಲ. ಈ ಮುಂಗಡಗಳ ಮಂಜೂರಾತಿಗಾಗಿ ಅಧಿಕಾರಿಯವರು ಆಡಳಿತಾತ್ಮಕ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಅರ್ಜಿ ಸಲ್ಲಿಸತಕ್ಕದ್ದು.

18)ದಿನಾಂಕ:10–7–96 ಸಂಖ್ಯೆ–ಎಫ್ ಡಿ 1 ಟಿಎಫ್‌ಪಿ 96 ರ ಸರ್ಕಾರಿ ಆದೇಶದನ್ವಯ ಆರ್ಥಿಕ ಇಲಾಖೆ ಸಹಮತಿಯನ್ನು ಪೂರ್ವಭಾವಿಸಿ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಪಿ.ಆರ್. 1561 ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## FOREST, ECOLOGY AND ENVIRONMENT SECRETARIAT

**Sub :** Diversion of 10.52 ha. of forest land in respect of already approved proposal (for diversion of 32.38 ha. of already broken up forest land) for renewal of Mining Lease No.2093 in favour of M/s Gogga Gurushanthaiah and Brothers in Bellary district of Karnataka.

**Read :**

1. Letter No.A5(B1)MNG.CR.578/88-89(II), dated 04/06/1999 of the Principal Chief Conservator of Forests, Bangalore.
2. State Government letter No.FEE 20 FFM 99,dated 26/07/1999.
3. Government of India Ministry of Environment and Forests, New Delhi letter No.8-20/2002-FC, dated: 7/8.07.2003.
4. Government Order No.FEE 20 FFM 99, dated: 01.08.2003.

5. Government of India Ministry of Environment and Forests, New Delhi letter No.8-20/2002-FC, dated: 2nd July 2004.
6. Letter No. A5(1)MNG.CR.578/88-89, dated: 17.06.2006. of Principal Chief Conservator of Forests,Bangalore.
7. State Government letter No.FEE 104 FFM 2004, dated:27.06.2006.
8. Government of India, Ministry of Environment and Forests,New Delhi letter No. 8-20/2002-FC, dated: 5th July 2006.

**PREAMBLE:-**

The Principal Chief Conservator of Forests had sent proposal vide his letter dated: 04/06/1999 read at (1) above for renewal of Mining lease No. 2093 in favour M/s Gogga Gurushanthaiah and Brothers, Hospet Bellary District over an area of 42.90 ha. of forest land in N.E.Block of Sandur Taluk, Bellary District for a period of 20 years subject to certain conditions.

The proposal of the Principal Chief Conservator of Forests was recommended to Government of India, Ministry of Environment and Forests, New Delhi vide Government letter dated 26.07.1999 read at (2) above seeking prior approval of Government of India under section 2 of Forest (Conservation) Act, 1980.

After careful consideration of the proposal of the State Government, Government of India vide its letter dated 7/8-7-2003 read at (3) above gave its approval for diversion of 32.38 ha. of forest land in favour of M/s Gogga Gurushanthaiah and Brothers for renewal of M.L.No.2093, in N.E.Block, Sandur Taluk, Bellary District subject to fulfillment of certain conditions.

Accordingly Government Order read at (4) above was issued for diversion of 32.38 ha. (already broken up area/used up area) of forest land in favour of M/s Gogga Gurushanthaiah and Brothers for renewal of M.L.No.2093, in N.E.Block, Sandur Taluk, Bellary District.

Later the Central Government agreed in-principle for diversion of the remaining 10.52 ha. fresh area in respect of already approved renewal of mining lease No.2093 of forest land (32.38 ha. already broken up area was approved earlier) in favour of M/s Gogga Gurushanthaiah and Brothers for renewal of M.L.No.2093, in N.E.Block, Sandur Taluk, Bellary District, Karnataka for a period of 20 years coterminus with the mining lease granted under MMRD Act, 1957, subject to fulfillment of certain conditions vide letter read at (5) above.

In compliance of the conditions stipulated by Government of India vide its letter dated 02.07.2004 the Principal Chief Conservator of Forests vide his letter dated 17.06.2006 read at (6) above has sent his compliance report. This compliance report was forwarded to Government of India vide State Government letter dated 27.06.2006 read at (7) above.

Finally Government of India vide its letter dated:5th July 2006 read at (8) above has conveyed its approval under Section 2 of Forest (Conservation) Act, 1980 for diversion of 10.52 ha. of forest land in favour of M/s Gogga Gurushanthaiah and Brothers for renewal of M.L.No.2093, in N.E.Block, Sandur Taluk, Bellary District subject to the fulfillment of certain conditions. Hence the order.

**Govt. Order No:FEE 104 FFM 2004, Bangalore, Dated: 02nd November 2006.**

After examining all aspects of the matter and in view of the approval accorded to the proposal by Government of India, Ministry of Environment and Forests, New Delhi, Government are pleased to accord its approval under Section 2 of Forest (Conservation) Act, 1980 for diversion of 10.52 ha. of forest land( for diversion of 32.38 ha. of already broken up forest land) for renewal of M.L.No.2093, for extraction of iron ore in favour of M/s Gogga Gurushanthaiah and Brothers in N.E.Block, Sandur Taluk, Bellary District subject to the following conditions.

1) Legal status of forest land shall remain unchanged.
2) i) Compensatory Afforestation shall be raised and maintained by the State Forest Department at the project cost.
ii) Fencing, protection and regeneration of the safety zone area (7.5 meter strip all along the outer boundary of the mining lease area) shall be done at the project cost. Besides this, afforestation on degraded forest land, to be selected elsewhere, measuring one and a half times the area under safety zone, shall also be done at the project cost.
3) The period of diversion for the total diverted area of 42.90 ha. shall be co-terminus with the mining lease granted under MMRD Act 1957.
4) The lessee should take up planting work on the static dumps during the advance mining operation.
5) The lessee has to pay the Net Present Value (NPV) fixed by the Govt. in Notification No.FEE 247 FGL 2002 dated 17/01/2004.

6) All the funds obtained as Net Present Value of diverted forest land should be deposited with Compensatory Afforestation Fund Management of Planning Authority(CAMPA).
7) All the dumps shall be fully reclaimed by afforestation immediately after closure of the mine in the shortest possible period under supervision of the State Forest Department.
8) Any tree felling shall be done only when it is absolutely necessary and unavoidable, and that too under strict supervision of the State Forest Department.
9) No damage to the flora and fauna of the area shall be caused.
10) Reclamation Plan shall be strictly implemented which shall be monitored regularly by the State Forest Department.
11) It shall be ensured that no labour-camps are set up inside the forest area.
12) The forest land shall not be used for any purpose other than that specified in the proposal.
13) All the conditions of the earlier approval granted in Government Order dated: 1.8.2003 for diversion of 32.38 ha. of already broken-up forest land for renewal of Mining Lease No.2093 in favour of M/s Gogga Gurushanthaiah and Brothers in Bellary district of Karnataka shall be applicable.
14) Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

By order and in the name of the Governor of Karnataka

P.R. 1601

**P.R.KALAVATHI**
Under Secretary to Government,
Forest, Ecology and Environment Department.

**Sub :** Renewal of M.L.No.1028 in favour of M/s Gogga Gurushanthaiah and Brothers, Hospet for iron ore mines over an area of 15.10 ha. in Kwategudda, Joga RF, Bellary District.

**Read :**
1. Letter No.A5(B1)MNG.CR.2/2001-02, dated 2/7-8/2001 and 17.06.2006 of the Principal Chief Conservator of Forests, Bangalore.
2. State Government letter No.FEE 51 FFM 2004, dated 22/12/2003 and 27/06/2006.
3. Government of India Ministry of Environment and Forests, Regional Office, South Zone, Bangalore.letter No.F©A/16.1/101/KAR/MIN, dated 21.04.2005 and 25th August 2006.

**PREAMBLE:-**

The Principal Chief Conservator of Forests had sent proposal vide his letter dated: 2/7-8/2001 read at (1) above for Renewal of M.L.No.1028 in favour of M/s Gogga Gurushanthaiah and Brothers, Hospet for iron ore mines over an area of 28.00 ha. of forest land in Kwategudda, Joga RF, Bellary District subject to certain conditions.

The proposal of the Principal Chief Conservator of Forests was recommended to Government of India, Ministry of Environment and Forests, Regional Office, South Zone, Bangalore vide Government letter dated 22/12/2003 read at (2) above seeking prior approval of Government of India under section 2 of Forest (Conservation) Act, 1980.

After careful consideration of the proposal of the State Government, Government of India vide its letter dated 21.04.2005 read at (3) above has agreed in-principle subject to the fulfillment of certain conditions.

In compliance of the conditions stipulated by Government of India vide its letter dated 21.04.2005 the Principal Chief Conservator of Forests vide his letter dated 17.06.2006 read at (1) above has sent his compliance report. This compliance report was forwarded to Government of India vide State Government letter dated: 27/06/2006 read at (2) above.

Finally Government of India vide its letter dated:25th August 2006 read at (3) above has conveyed its general approval under Section 2 of Forest (Conservation) Act, 1980 for Renewal of M.L.No.1028 in favour of M/s Gogga Gurushanthaiah and Brothers, Hospet for iron ore mines over an area of 15.10 ha. of forest land in Kwategudda, Joga RF, Bellary District for a period of 20 years with effect from 13.08.2003 i.e. from the date of grant of TWP, subject to fulfillment of certain conditions. Hence the order.

**Govt. Order No:FEE 92 FFM 2001, Bangalore, Dated: 02nd November 2006**

After examining all aspects of the matter and in view of the approval accorded to the proposal by Government of India, Ministry of Environment and Forests, Regional Office(South Zone),Bangalore, Government are pleased to accord its approval under Section 2 of Forest (Conservation) Act, 1980 for renewal of M.L.No.1028 in favour of M/s Gogga Gurushanthaiah and Brothers, Hospet for iron ore mines over an area of 15.10 ha. of forest land in Kwategudda, Joga RF, Bellary District for a period of 20 years with effect from 13.08.2003 i.e. from the date of grant of TWP, subject to the following conditions.

1. Legal status of forest land shall remain unchanged.
2. Demarcation of forest area proposed for the project shall be carried out by erecting 4 feet high RCC pillars duly numbered serially forward and backward at the cost of user agency.
3. The State Forest Department shall raise and maintain a Safety Zone and will also raise and maintain the plantation over an area, one and half times of the extent of the safety zone, of the degraded forest land, elsewhere at the project cost.
4. A comprehensive plan for afforestation, reclamation and soil and water conservation shall be executed by the user agency and an annual report shall be sent to Nodal Officer, Karnataka and this Regional Office.
5. No new construction of building for any purpose will be taken up in the forest area diverted for the project.
6. The funds received from the user agency towards NPV under the project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003.
7. The mining activity in the forest area shall be carried out as per the approved mining plan from the IBM.
8. The Environmental clearance shall be obtained from the Ministry of Environment and Forests as per EIA Notification dated: 27.01.1994.
9. The consent of State Pollution Control Board shall be obtained under Air and Water Act before the commencement of mining operation and it shall be renewed every year.
10. Trees shall be felled only when it becomes necessary and in the supervision of State Forest Department.
11. No labour camps shall be established on the forest land.
12. Sufficient firewood shall be provided by the User agency to the labourers at the project cost after purchase from the State Forest Department/Forest Development Corporation.
13. The User Agency shall ensure that there is no damage to the available wildlife.
14. The Forest land shall not be used for any purpose other than that specified in the proposal.
15. The total forest area utilized for the project shall not exceed 15.10 ha.
16. The lessee has to pay the Net Present Value (NPV) fixed by the Govt. Notification No.FEE 247 FGL 2002 dated 17/01/2004.
17. The lessee shall pay usual lease rent and other charges as prescribed by the Govt. from time to time.
18. The lessee shall deposit the amount at prevailing rate towards raising of Compensatory afforestation.
19. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.
20. The lessee shall undertake the afforestation measures in the vacant area of the lease.
21. The lessee shall carryout soil and water conservation measures and other necessary measures as advised by the Forest Department from time to time.
22. The lessee shall undertake to protect rigidly the leased area and forest area surrounding the area up to one Km. from the leased area.
23. The lessee shall not cut any trees without prior permission of the Forest Department and all produce of permitted felling should be handed over to Forest Department under cover of receipt.
24. The lessee shall abide by all the conditions prescribed by Govt. of India and Govt. of Karnataka.
25. The lessee shall execute an agreement with the Forest Dept. binding himself to abide by all usual conditions and terms as per orders of the Govt. as well as Principal Chief Conservator of Forests.
26. The lessee shall take-up the planting work on the static dumps during the advance mining operations and put retaining wall around the dumps.
27. In case of violation of agreement conditions, the Deputy Conservator of Forests, is authorized under section 82 of Karnataka Forest Act 1963 forefeit the lease.
28. Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

By order and in the name of the Governor of Karnataka

P.R. 1602

**P.R.KALAVATHI**
Under Secretary to Government,
Forest, Ecology and Environment Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಕಾಡಾ ವಿಭಾಗದಲ್ಲಿನ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸುವ ಕಾಡಾ ವಿಭಾಗದಲ್ಲಿನ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ :** ಜಲಸಂಪನ್ಮೂಲ ಇಲಾಖೆ ಟಿಪ್ಪಣಿ ಸಂಖ್ಯೆ: ಜಸಂಇ 17 ಸಿಎಎಂ 2004, ದಿನಾಂಕ: 11.8.2006.

**ಪ್ರಸ್ತಾವನೆ :**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆಯು, ಆ ಇಲಾಖೆಯ ಕಾಡಾ ವಿಭಾಗದಲ್ಲಿ ಸೃಜಿಸಿ ಕಾಲ ಕಾಲಕ್ಕೆ ಮುಂದುವರಿಸಿಕೊಂಡು ಬಂದಿರುವ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಮಾಡುವ ಕುರಿತು ಯೋಜನಾ ಇಲಾಖೆಯು ಟಿಪ್ಪಣಿ ಸಂಖ್ಯೆ:20/ಸಂಪೂರ್ಣ ಯೋಜನಾ ವಿಭಾಗ/2006 ದಿನಾಂಕ:8.12.2006ಲ್ಲಿ ಮತ್ತು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ:ಲೋಇ 180 ಆಕೋ-3/2006 ದಿನಾಂಕ:4.7.2006ರಲ್ಲಿ ನೀಡಿದ ಅಭಿಪ್ರಾಯದಂತೆ ದಿನಾಂಕ:20.7.2006 ರಂದು ನಡೆದ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ರಚಿಸಲಾದ ಸಮಿತಿಯ ಮುಂದೆ ಇಟ್ಟಿದ್ದು, ಸದರಿ ಹುದ್ದೆಗಳನ್ನು ಖಾಯಂಗೊಳಿಸಲು ಸಮಿತಿಯು ನಿರ್ಣಯ ತೆಗೆದುಕೊಂಡಿರುವ ಹಿನ್ನೆಲೆಯಲ್ಲಿ ಆ ಹುದ್ದೆಗಳನ್ನು ಖಾಯಂಗೊಳಿಸಲು ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

| ಸಂಖ್ಯೆ | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| 2 | ಸಹಾಯಕ ಸಾಂಖ್ಯಿಕ ಅಧಿಕಾರಿ | 1 |
| 3 | ಸಹಾಯಕ | 1 |
| 4 | ಬೆರಳಚ್ಚುಗಾರ | 1 |
| 5 | ಶಾಖಾಧಿಕಾರಿ | 1 |
| 6 | ಹಿರಿಯ ಸಹಾಯಕ | 1 |
| 7 | ಶೀಘ್ರಲಿಪಿಗಾರ | 1 |
| 8 | ಕಿರಿಯ ಸಹಾಯಕ | 1 |
| 9 | ಬೆರಳಚ್ಚುಗಾರ | 1 |
| 10 | ದಲಾಯತ್ | 2 |
| | **ಒಟ್ಟು** | **11** |

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 34 ಸಸಿವಿ 2006, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಕಾಡಾ ವಿಭಾಗದ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಖಾಯಂಗೊಳಿಸಲಾಗಿದೆ.

| ಸಂಖ್ಯೆ | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| 2 | ಸಹಾಯಕ ಸಾಂಖ್ಯಿಕ ಅಧಿಕಾರಿ | 1 |
| 3 | ಸಹಾಯಕ | 1 |
| 4 | ಬೆರಳಚ್ಚುಗಾರ | 1 |
| 5 | ಶಾಖಾಧಿಕಾರಿ | 1 |
| 6 | ಹಿರಿಯ ಸಹಾಯಕ | 1 |
| 7 | ಶೀಘ್ರಲಿಪಿಗಾರ | 1 |
| 8 | ಕಿರಿಯ ಸಹಾಯಕ | 1 |
| 9 | ಬೆರಳಚ್ಚುಗಾರ | 1 |
| 10 | ದಲಾಯತ್ | 2 |
| | **ಒಟ್ಟು** | **11** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1647

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಅಬ್ದುಲ್ ಮುಜೀಬ್, ಜಂಟಿ ನಿರ್ದೇಶಕರು (ನಿವೃತ್ತ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಮತ್ತು ಇವರ ಇಲಾಖಾ ಪೂರ್ವ ಸೇವೆಯನ್ನು ನಿವೃತ್ತಿ ಸೌಲಭ್ಯಕ್ಕಾಗಿ ಪರಿಗಣಿಸುವ ಬಗ್ಗೆ.

**ಓದಲಾಗಿದೆ :** 1) ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ2/101/2005-06, ದಿನಾಂಕ:18.03.2006,02.05.2006,25.07.2006,24.08.206 ಹಾಗೂ 04.09.2006.

ಮೇಲೆ ಓದಲಾದ ಪತ್ರಗಳಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಶ್ರೀ ಅಬ್ದುಲ್ ಮುಜೀಬ್, ಜಂಟಿ ನಿರ್ದೇಶಕರು (ನಿವೃತ್ತ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ದಿನಾಂಕ:17.11.1982 ರಿಂದ ಕರ್ತವ್ಯ ನಿರ್ವಹಿಸುತ್ತಿದ್ದರೆಂದು, ಈ ಅಧಿಕಾರಿಯವರು ಇಲಾಖಾ ಸೇವೆಗೆ ಸೇರುವ ಮುನ್ನ ಲೋಕೋಪಯೋಗಿ ಇಲಾಖೆಯಲ್ಲಿ ಜೂನಿಯರ್ ಇಂಜಿನಿಯರ್ (ಕಿರಿಯ ಅಭಿಯಂತರರು) ಹುದ್ದೆಯಲ್ಲಿ ದಿನಾಂಕ:7.8.1973 ರಿಂದ 8.11.1982ರವರೆಗೆ ಸಲ್ಲಿಸಿರುವ ಸೇವೆಯನ್ನು ನಿವೃತ್ತಿ ಸೌಲಭ್ಯಗಳಿಗೆ ಪರಿಗಣಿಸಲು ಅಗತ್ಯ ಮಾಹಿತಿ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾನೆಯನ್ನು ಸಲ್ಲಿಸಿದ್ದಾರೆ.

ಕೈಗಾರಿಕಾಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಸದರಿ ಅಧಿಕಾರಿಯು ಸಲ್ಲಿಸಿರುವ ಇಲಾಖಾ ಪೂರ್ವ ಸೇವೆಯನ್ನು ನಿವೃತ್ತಿ ಸೌಲಭ್ಯಗಳಿಗೆ ಪರಿಗಣಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 04 ಕೈನಿವಿ 2006, ದಿನಾಂಕ: 18ನೇ ನವೆಂಬರ್ 2006**

ಪ್ರಸ್ತಾವಿತ ವಿವರಗಳ ಮೇರೆಗೆ ಶ್ರೀ ಅಬ್ದುಲ್ ಮುಜೀಬ್, ಜಂಟಿ ನಿರ್ದೇಶಕರು (ನಿವೃತ್ತ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ದಿನಾಂಕ: 17.11.1982 ರಂದು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಸೇವೆಗೆ ಸೇರುವ ಮುನ್ನ ಲೋಕೋಪಯೋಗಿ ಇಲಾಖೆಯಲ್ಲಿ ದಿನಾಂಕ:7.8.1973 ರಿಂದ 8.11.1982ರವರೆಗೆ ಕಿರಿಯ ಅಭಿಯಂತರರ ಹುದ್ದೆಯಲ್ಲಿ ಸಲ್ಲಿಸಿರುವ ಇಲಾಖಾಪೂರ್ವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯಾನುಸಾರ ನಿಯಮ 224(ಎ)ರ ಅನ್ವಯ ನಿವೃತ್ತಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/1735/ವೆಚ್ಚ-1/2006, ದಿನಾಂಕ:4.11.2006ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ವಾಸನ್**

ಪಿ.ಆರ್. 1648

ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 93 ಸಸಿವಿ 2005, ದಿ:26.12.2005.
2. ಕಡತ ಸಂಖ್ಯೆ: ಆನಾಸ 197 ಇಭಾತ 2006.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:26.12.2005ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಉನ್ನತೀಕರಿಸಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 1.1.2006 ರಿಂದ ಒಂದು ವರ್ಷದವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓಲಾದ ಕಡತದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಮತ್ತು ಪೂರಕ ಸಿಬ್ಬಂದಿ ಹುದ್ದೆಗಳನ್ನು 1.1.2007 ರಿಂದ ಜಾರಿಗೆ ಬರುವಂತೆ ಒಂದು ವರ್ಷದವರೆಗೆ ಮುಂದುವರೆಸಲು ಪ್ರಸ್ತಾವನೆ ಇದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 84 ಸಸಿವಿ 2006, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1.1.2007 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1649

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಸಮಾಜ ಕಲ್ಯಾಣ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಸಕಇ 35 ಬಿಸಿಎ 2006, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2006**

ಸರ್ಕಾರದ ಆದೇಶ ಸಂಖ್ಯೆ:ಸಕಇ 97 ಬಿಸಿಎ 2004 (ಭಾಗ-1) ಬೆಂಗಳೂರು ದಿನಾಂಕ:3.11.2005ರ ಅನುಬಂಧದ ಭಾಗ-3ಲ್ಲಿನ ಕ್ರಮ ಸಂಖ್ಯೆ:3ರಲ್ಲಿ ನಮೂದಿಸಿರುವ ಜಿಲ್ಲಾಧಿಕಾರಿಗಳು (commissioner)ಗೆ ಬದಲಾಗಿ ಕೇಂದ್ರ ಸ್ಥಾನಿಕ ಸಹಾಯಕ ಸದಸ್ಯರು (H O A) ಎಂಬುದಾಗಿ ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಪಿ.ಆರ್. 1650

ಸರ್ಕಾರದ ಅಧೀನ ಕಾರ್ಯದರ್ಶಿ-II,
ಸಮಾಜ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಕೃಷ್ಣಾ ಮೇಲ್ದಂಡೆ ಯೋಜನೆಯ ಬಾಧಿತ ಸಂತ್ರಸ್ಥರಿಗೆ ಅನುಕಂಪ ಪರಿಹಾರ ನೀಡುವಲ್ಲಿ ಆಗಿರುವ ಅವ್ಯವಹಾರದಲ್ಲಿ ಶಾಮೀಲಾಗಿರುವ ಅಧಿಕಾರಿ ಹಾಗೂ ಸಿಬ್ಬಂದಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ಮಂಡನಾಧಿಕಾರಿ ಬದಲಾಯಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ ಆರ್.ಡಿ. 62 ಎಡಿಇ 97, ದಿನಾಂಕ 27.7.2001.
2. ಬಾಗಲಕೋಟೆ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಆರ್‌ಬಿ/ಇಎಸ್‌ಟಿ-3/ಸಿಆರ್-16/2001-02, ದಿನಾಂಕ: 13.9.2006.

**ಪ್ರಸ್ತಾವನೆ :**

ಬೀಳಗಿಯ ಕೃಷ್ಣಾ ಮೇಲ್ದಂಡೆ ಯೋಜನೆಯ ಪುನರ್ ವಸತಿ ಮತ್ತು ಪುನರ್ ನಿರ್ಮಾಣ ಘಟಕಲ್ಲಿ ಕೆಲಸ ನಿರ್ವಹಿಸುತ್ತಿರುವ ಪುನರ್ ವಸತಿ ಅಧಿಕಾರಿಗಳ ಕಾರ್ಯಾಲಯದಲ್ಲಿ ಯೋಜನಾ ಬಾಧಿತ ಸಂತ್ರಸ್ಥರಿಗೆ ನೀಲಾಗಿರುವ ಅನುಕಂಪ ಭತ್ಯೆ ವಿತರಣೆಯಲ್ಲಿ ಭಾರಿ ಪ್ರಮಾಣದಲ್ಲಿ ಅವ್ಯವಹಾರ ನಡೆದಿದ್ದು, ಸಂಬಂಧಿಸಿದ ದಾಖಲೆಗಳನ್ನು ಪಡೆದುಕೊಳ್ಳದೆ, ಇಚ್ಛಾನುಸಾರ ಹಾಗೂ ಕಾನೂನು ಬಾಹಿರವಾಗಿ ಅನುಕಂಪ ಭತ್ಯೆ ವಿತರಿಸಿದ್ದು, ಶ್ರೀ ರಾಮಕೃಷ್ಣ, ವಿಶೇಷ ತಹಶೀಲ್ದಾರ್, ಗ್ರೇಡ್-2, ಇವರು ಪುನರ್ ವಸತಿ ಅಧಿಕಾರಿ, ಬೀಳಗಿ ಎಂದು ಪ್ರಭಾರ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕಾನೂನು ಬಾಹಿರವಾಗಿ ಮತ್ತು ಯಾವುದೇ ನಿಯಮಗಳನ್ನು ಗಣನೆಗೆ ತೆಗೆದುಕೊಳ್ಳದೆ ಇಚ್ಛಾನುಸಾರ ಸಂತ್ರಸ್ಥರಿಗೆ ಅನುಕಂಪ ಭತ್ಯೆ ವಿತರಣೆಯಲ್ಲಿ ಭಾರಿ ಪ್ರಮಾಣದ ಅವ್ಯವಹಾರದಲ್ಲಿ ಶಾಮೀಲಾಗಿದ್ದರಿಂದ ಹಾಗೂ ಈ ಕೆಳಕಂಡ ಇವರು ಮತ್ತು ಇವರ ಕಛೇರಿಯ ಸಿಬ್ಬಂದಿ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:27.7.2001ರ ಆದೇಶದಲ್ಲಿ ಬಾಗಲಕೋಟೆ ಜಿಲ್ಲಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಡೆಪ್ಯುಟಿ ಜನರಲ್ ಮ್ಯಾನೇಜರ್ ಯು.ಕೆ.ಪಿ. ಬಾಗಲಕೋಟೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಡೆಪ್ಯುಟಿ ಜನರಲ್ ಮ್ಯಾನೇಜರ್, ಯು.ಕೆ.ಪಿ. ಬಾಗಲಕೋಟೆ ಇವರು ನಿವೃತ್ತಿ ಹೊಂದಿದ ಕಾರಣ ಸದರಿ ಸ್ಥಾನವು ಖಾಲಿ ಇರುತ್ತದೆಂದು ಈ ಕಾರಣಗಳಿಂದ ಪ್ರಕರಣದ ವಿಚಾರಣೆ ಮಾಡುವುದರಲ್ಲಿ ವಿಳಂಬ ಆಗಿರುತ್ತದೆಂದು, ಮಂಡನಾಧಿಕಾರಿಯನ್ನು ನೇಮಕ ಮಾಡಿದಲ್ಲಿ, ಜಂಟಿ ಇಲಾಖಾ ವಿಚಾರಣೆ ಶೀಘ್ರವಾಗಿ ಜರುಗಿಸಲಾಗುವುದೆಂದು ಮೇಲೆ ಓದಲಾದ ಕ್ರ. ಸಂ. (2)ರ ದಿನಾಂಕ: 13.9.2006ರ ಪತ್ರಲ್ಲಿ ಬಾಗಲಕೋಟೆ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

1. ಶ್ರೀ ರಾಮಕೃಷ್ಣ, ತಹಶೀಲ್ದಾರ್, ಗ್ರೇಡ್-1
2. ಶ್ರೀ ವಿಜಯಕುಮಾರ್, ಪ್ರಥಮ ದರ್ಜೆ ಸಹಾಯಕ
3. ಶ್ರೀ ಎಸ್.ವಿ. ಅಡಿಕೆ (ಶೇಷಚಾರ್ಯ), ಶಿರಸ್ತೇದಾರ್
4. ಶ್ರೀ ಬಿ.ಆರ್. ದಾಸರ್, ಪ್ರಥಮ ದರ್ಜೆ ಕಂದಾಯ ನಿರೀಕ್ಷಕರು
5. ಶ್ರೀ ಅಹಮದ್ ಬಾವಾ, ಲೆಕ್ಕಾಧೀಕ್ಷಕ
6. ಶ್ರೀ ವೈ.ಎಂ. ಖೋತ, ಶಿರಸ್ತೇದಾರ್
7. ವೆಂಕಪ್ಪ ದಾಸರ್, ದ್ವಿತೀಯ ದರ್ಜೆ ಸಹಾಯಕ.

ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: 62 ಎಡಿಇ 97, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂ: ಆರ್.ಡಿ. 62 ಎಡಿಇ 1997, ದಿನಾಂಕ: 27.7.2001ರಲ್ಲಿ ಶ್ರೀ ರಾಮಕೃಷ್ಣ ತಹಶೀಲ್ದಾರ್, ಗ್ರೇಡ್-1 ಹಾಗೂ ಇತರ 6 ಮಂದಿ ನೌಕರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ವಿಚಾರಣಾಧಿಕಾರಿಗಳನ್ನು ನೇಮಕಮಾಡಿ ಶಿಸ್ತು ಪ್ರಾಧಿಕಾರಿಯವರ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರನ್ವಯ ಡೆಪ್ಯುಟಿ ಜನರಲ್ ಮ್ಯಾನೇಜರ್, ಯು.ಕೆ.ಪಿ, ಬಾಗಲಕೋಟೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿರುವುದನ್ನು ಬದಲಾಯಿಸಿ ಸಹಾಯಕ ಆಯುಕ್ತರು, ಬಾಗಲಕೋಟೆ ಉಪವಿಭಾಗ, ಬಾಗಲಕೋಟೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

ಪಿ.ಆರ್. 1651

## ಶಿಕ್ಷಣ ಸಚಿವಾಲಯ

**ವಿಷಯ :** ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ನೇರ ನೇಮಕಾತಿಗೆ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯ ಕಮರ್ಷಿಯಲ್ ಪ್ರಾಕ್ಟೀಸ್‌ನ ಶೀಘ್ರಲಿಪಿ ಮತ್ತು ಬೆರಳಚ್ಚು ವಿಷಯಗಳ ತೇರ್ಗಡೆಯ ತತ್ಸಮಾನತೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಶಿಇ 26 ತಾಪಾಸೇ 1988, ದಿನಾಂಕ: 1.3.88.
2. ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ ಅವರ ಪತ್ರ ಸಂಖ್ಯೆ: ಶೀಬೇಪ್ರಾ 01 ಇತರೆ 04, ದಿನಾಂಕ:3.2.2006 ರಂದು ಕೊನೆಗೊಂಡ ಪತ್ರ.
3. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಬಿಟಿಇ/06/ಇಎಸ್‌ಟಿ (2) (ಬಿ) 2004/6096, ದಿನಾಂಕ: 22.3.2006.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುತ್ತಿರುವ ಕಮರ್ಷಿಯಲ್ ಪ್ರಾಕ್ಟೀಸ್ ಡಿಪ್ಲೋಮೊ ಪರೀಕ್ಷೆ ಹೊಸ ಪಠ್ಯ ಕ್ರಮವನ್ನು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುತ್ತಿರುವ ಕಿರಿಯ ಮತ್ತು ಪ್ರೌಢ ದರ್ಜೆ ಬೆರಳಚ್ಚು ಮತ್ತು ಶೀಘ್ರಲಿಪಿ ಪರೀಕ್ಷೆಗಳಿಗೆ ತತ್ಸಮಾನವೆಂದು ಈ ಕೆಳಕಂಡಂತೆ ಆದೇಶಿಸಿದೆ.

| ಕ್ರ. ಸಂ. | ವಿದ್ಯಾರ್ಹತೆ | ಕಾಲಂ 2ರಲ್ಲಿನ ವಿದ್ಯಾರ್ಹತೆ ಇದಕ್ಕೆ ಸಮ |
|---|---|---|
| 1. | ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯ ಕಮರ್ಷಿಯಲ್ ಪ್ರಾಕ್ಟೀಸ್ (ಹೊಸ ಪಠ್ಯಕ್ರಮ)ನ ಎರಡನೇ ವರ್ಷದ ಡಿಪ್ಲೋಮೊದಲ್ಲಿ ಕನ್ನಡ ಬೆರಳಚ್ಚು ವಿಷಯದಲ್ಲಿ ಉತ್ತೀರ್ಣತೆ. | ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಕಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಸಮ. |
| 2. | ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯ ಕಮರ್ಷಿಯಲ್ ಪ್ರಾಕ್ಟೀಸ್ (ಹೊಸ ಪಠ್ಯಕ್ರಮ)ನ ಎರಡನೇ ವರ್ಷದ ಡಿಪ್ಲೋಮೊದಲ್ಲಿ ಕನ್ನಡ ಶೀಘ್ರಲಿಪಿ ವಿಷಯದಲ್ಲಿ ಉತ್ತೀರ್ಣತೆ. | ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಕಿರಿಯ ದರ್ಜೆಯ ಕನ್ನಡ ಶೀಘ್ರಲಿಪಿ ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಸಮ. |
| 3. | ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯ ಕಮರ್ಷಿಯಲ್ ಪ್ರಾಕ್ಟೀಸ್ (ಹೊಸ ಪಠ್ಯಕ್ರಮ)ನ ಮೂರನೇ ವರ್ಷದ ಡಿಪ್ಲೋಮೊದಲ್ಲಿ ಕನ್ನಡ ಬೆರಳಚ್ಚು ವಿಷಯದಲ್ಲಿ ಉತ್ತೀರ್ಣತೆ. | ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಪ್ರೌಢ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಸಮ. |
| 4. | ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯ ಕಮರ್ಷಿಯಲ್ ಪ್ರಾಕ್ಟೀಸ್ (ಹೊಸ ಪಠ್ಯಕ್ರಮ)ನ ಮೂರನೇ ವರ್ಷದ ಡಿಪ್ಲೋಮೊದಲ್ಲಿ ಕನ್ನಡ ಶೀಘ್ರಲಿಪಿ ವಿಷಯದಲ್ಲಿ ಉತ್ತೀರ್ಣತೆ. | ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಪ್ರೌಢ ದರ್ಜೆಯ ಕನ್ನಡ ಶೀಘ್ರಲಿಪಿ ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಸಮ. |

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರವು ತಾಂತ್ರಿಕ ಪರೀಕ್ಷಾ ಮಂಡಳಿಯ ಕಮರ್ಷಿಯಲ್ ಪ್ರಾಕ್ಟೀಸ್ ಪಠ್ಯಕ್ರಮದ ಕನ್ನಡ ಬೆರಳಚ್ಚು ಮತ್ತು ಶೀಘ್ರಲಿಪಿ ವಿಷಯಗಳು ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿಯ ಬೆರಳಚ್ಚು ಮತ್ತು ಶೀಘ್ರಲಿಪಿ ವಿಷಯಗಳಿಗೆ ಸಮಾನತೆ ಕುರಿತು ಸ್ಪಷ್ಟೀಕರಣ ನೀಡುವಂತೆ ಕೋರಿಕೆ ಸಲ್ಲಿಸಿದ್ದಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ತಾಂತ್ರಿಕ ಶಿಕ್ಷಣ ನಿರ್ದೇಶಕರು ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯ ಎಲ್ಲಾ ಪಾಲಿಟೆಕ್ನಿಕ್‌ಗಳಿಗೆ (ಸ್ವಾಯತ್ತ ಸಂಸ್ಥೆಗಳನ್ನು ಹೊರತುಪಡಿಸಿ) ಅನ್ವಯವಾಗುವಂತೆ 2003-04ನೇ ಶೈಕ್ಷಣಿಕ ಸಾಲಿನಿಂದ ಜಾರಿಯಾಗಿರುವ ಸೆಮಿಸ್ಟರ್ ಪರೀಕ್ಷಾ ಹೊಸ ಪಠ್ಯಕ್ರಮದ ಅನ್ವಯ, ಕಮರ್ಷಿಯಲ್ ಪ್ರಾಕ್ಟೀಸ್ ಡಿಪ್ಲೊಮಾ ಪರೀಕ್ಷೆಗಳ ಕನ್ನಡ ಬೆರಳಚ್ಚು ಮತ್ತು ಶೀಘ್ರಲಿಪಿ ವಿಷಯಗಳ ಪರೀಕ್ಷೆಗಳ ಮಾರ್ಪಾಡು ಆಗಿದ್ದು ಇದನ್ನು ನೇಮಕಾತಿಗಾಗಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಕನ್ನಡ ಬೆರಳಚ್ಚು-ಶೀಘ್ರಲಿಪಿ ಪರೀಕ್ಷೆಗಳ ತತ್ಸಮಾನತೆಗೆ ಪರಿಗಣಿಸಬೇಕಾಗುತ್ತದೆ ಎಂದು ತಿಳಿಸಿರುತ್ತಾರೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 174 ಟಿಪಿಇ 2005, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2006**

ತಾಂತ್ರಿಕ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ದಿನಾಂಕ:2.3.1988 ಸಂಖ್ಯೆ:ಇಡಿ 26 ತಾಪಾಸೇ 88ರ ಆದೇಶವನ್ನು ಮುಂದುವರೆಸುತ್ತಾ, ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುತ್ತಿರುವ ಕಮರ್ಷಿಯಲ್ ಪ್ರಾಕ್ಟೀಸ್ ಡಿಪ್ಲೊಮಾ ಪರೀಕ್ಷೆಗಳ ಕನ್ನಡ ಬೆರಳಚ್ಚು ಮತ್ತು ಶೀಘ್ರಲಿಪಿ ವಿಷಯಗಳ ಪರೀಕ್ಷೆಗಳ ಮಾರ್ಪಾಡನ್ನು ಈ ಕೆಳಕಂಡಂತೆ ಮಾಡಲಾಗಿದ್ದು ಇದನ್ನು ನೇಮಕಾತಿಗಾಗಿ ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಕನ್ನಡ ಬೆರಳಚ್ಚು ಮತ್ತು ಶೀಘ್ರಲಿಪಿ ಪರೀಕ್ಷೆಗಳ ತತ್ಸಮಾನತೆಗೆ ಪರಿಗಣಿಸಬೇಕಾಗುತ್ತದೆ ಎಂದು ಈ ಕೆಳಕಂಡಂತೆ ಆದೇಶಿಸಲಾಗಿದೆ.

| ಕ್ರ. ಸಂ. | ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಪರೀಕ್ಷೆಗಳ ತೇರ್ಗಡೆ | ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಪರೀಕ್ಷೆಗಳಿಗೆ ಅನ್ವಯವಾಗುವಂತೆ ತತ್ಸಮಾನತೆ |
|---|---|---|
| 1. | ಕಮರ್ಷಿಯಲ್ ಪ್ರಾಕ್ಟೀಸ್‌ನ 2ನೇ ಸೆಮಿಸ್ಟರ್ ಕನ್ನಡ ಬೆರಳಚ್ಚು ತೇರ್ಗಡೆ. | ವಾಣಿಜ್ಯ ಪರೀಕ್ಷೆಗಳ ಪ್ರಥಮ ದರ್ಜೆ ಕನ್ನಡ ಬೆರಳಚ್ಚು (ಜೂನಿಯರ್ ಗ್ರೇಡ್) |
| 2. | ಸಿ.ಪಿ. 3ನೇ ಮತ್ತು 4ನೇ ಸೆಮಿಸ್ಟರ್ ಕನ್ನಡ ಶೀಘ್ರಲಿಪಿ ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಶೀಘ್ರಲಿಪಿ ಪ್ರಥಮ ದರ್ಜೆ ಕನ್ನಡ (ಜೂನಿಯರ್ ಗ್ರೇಡ್) |
| 3. | ಸಿ.ಪಿ. 4ನೇ ಸೆಮಿಸ್ಟರ್ ಬೆರಳಚ್ಚು ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಬೆರಳಚ್ಚು ಪ್ರೌಢ ದರ್ಜೆ (ಸೀನಿಯರ್ ಗ್ರೇಡ್) |
| 4. | ಸಿ.ಪಿ. 5ನೇ ಮತ್ತು 6ನೇ ಸೆಮಿಸ್ಟರ್ ಶೀಘ್ರಲಿಪಿ ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಶೀಘ್ರಲಿಪಿ ಪ್ರೌಢ ದರ್ಜೆ (ಸೀನಿಯರ್ ಗ್ರೇಡ್) |

1999-2000ನೇ ಸಾಲಿನಿಂದ ಶೈಕ್ಷಣಿಕವಾಗಿ ಸ್ವಾಯತ್ತತೆ ಪಡೆದ ಈ ಕೆಳಕಂಡ (ತಾಂತ್ರಿಕ ಶಿಕ್ಷಣ ಇಲಾಖೆಯ ಅಧೀನದಲ್ಲಿರುವ ಸರ್ಕಾರಿ : ಅನುದಾನಿತ ಪಾಲಿಟೆಕ್ನಿಕ್‌ಗಳಲ್ಲಿ ಸಿ.ಪಿ. ಡಿಪ್ಲೋಮೊದ ಕನ್ನಡ ಬೆರಳಚ್ಚು ಹಾಗೂ ಶೀಘ್ರಲಿಪಿ ವಿಷಯಗಳಿಗೆ ಸಂಬಂಧಿಸಿದಂತೆ ನಡೆಸಲಾದ ಪರೀಕ್ಷೆಗಳು ಹಾಗೂ ಕನ್ನಡ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಸದರಿ ವಿಷಯಗಳ ತತ್ಸಮಾನತೆ ವಿವರ ಈ ಕೆಳಕಂಡಂತಿದೆ.

(ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೆಂಗಳೂರು 1999-2000 ದಿಂದ ಸಾಯತ್ತತ್ತೆ ಪಡೆದಿದೆ)

| ಕ್ರ. ಸಂ. | ಕಮರ್ಷಿಯಲ್ ಪ್ರಾಕ್ಟೀಸ್ ಡಿಪ್ಲೊಮೊ | ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಪರೀಕ್ಷೆಗಳಿಗೆ ತತ್ಸಮಾನತೆ |
|---|---|---|
| 1. | ಬೆರಳಚ್ಚು - 3ನೇ ಮತ್ತು 4ನೇ ಸೆಮಿಸ್ಟರ್ ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಬೆರಳಚ್ಚು ಪ್ರಥಮ ದರ್ಜೆಗೆ (ಜೂನಿಯರ್ ಗ್ರೇಡ್) ತತ್ಸಮಾನ |
| 2. | ಶೀಘ್ರಲಿಪಿ - 3ನೇ ಮತ್ತು 4ನೇ ಸೆಮಿಸ್ಟರ್ ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಶೀಘ್ರಲಿಪಿ ಪ್ರಥಮ ದರ್ಜೆಗೆ (ಜೂನಿಯರ್ ಗ್ರೇಡ್) ತತ್ಸಮಾನ |
| 3. | ಬೆರಳಚ್ಚು - 5ನೇ ಮತ್ತು 6ನೇ ಸೆಮಿಸ್ಟರ್ ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಬೆರಳಚ್ಚು ಪ್ರೌಢ ದರ್ಜೆಗೆ (ಸೀನಿಯರ್ ಗ್ರೇಡ್) ತತ್ಸಮಾನ |
| 4. | ಶೀಘ್ರಲಿಪಿ - 5ನೇ ಮತ್ತು 6ನೇ ಸೆಮಿಸ್ಟರ್ ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಶೀಘ್ರಲಿಪಿ ಪ್ರೌಢ ದರ್ಜೆಗೆ (ಸೀನಿಯರ್ ಗ್ರೇಡ್) ತತ್ಸಮಾನ |

**ಸೂಚನೆ:** 1999-2000 ದಿಂದ ಇಲ್ಲಿಯವರೆಗೆ ಸದರಿ ವಿಷಯಗಳ ಪಠ್ಯಕ್ರಮದಲ್ಲಿ ಬದಲಾವಣೆ ಇರುವುದಿಲ್ಲ.

**ಸಿ.ಪಿ.ಸಿ. ಸರ್ಕಾರಿ ಪಾಲಿಟೆಕ್ನಿಕ್, ಮೈಸೂರು (1999-2000ದ ವರೆಗೆ)**

| ಕ್ರ. ಸಂ. | ಕಮರ್ಷಿಯಲ್ ಪ್ರಾಕ್ಟೀಸ್ ಡಿಪ್ಲೊಮೊ | ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಪರೀಕ್ಷೆಗಳಿಗೆ ತತ್ಸಮಾನತೆ |
|---|---|---|
| 1. | 4ನೇ ಸೆಮಿಸ್ಟರ್ ಬೆರಳಚ್ಚು ತೇರ್ಗಡೆ | ಬೆರಳಚ್ಚು ಪ್ರಥಮ ದರ್ಜೆಗೆ ತತ್ಸಮಾನ |
| 2. | 4ನೇ ಸೆಮಿಸ್ಟರ್ ಶೀಘ್ರಲಿಪಿ ತೇರ್ಗಡೆ | ಶೀಘ್ರಲಿಪಿ ಪ್ರಥಮ ದರ್ಜೆಗೆ ತತ್ಸಮಾನ |
| 3. | 5ನೇ ಸೆಮಿಸ್ಟರ್ ಬೆರಳಚ್ಚು ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಬೆರಳಚ್ಚು ಪ್ರೌಢ ದರ್ಜೆಗೆ ತತ್ಸಮಾನ |
| 4. | 6ನೇ ಸೆಮಿಸ್ಟರ್ ಶೀಘ್ರಲಿಪಿ ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಶೀಘ್ರಲಿಪಿ ಪ್ರೌಢ ದರ್ಜೆಗೆ ತತ್ಸಮಾನ |

**ಸೂಚನೆ:** ಈ ಸಂಸ್ಥೆಯ 2003-04ನೇ ಶೈಕ್ಷಣಿಕ ಸಾಲಿನಿಂದ ಕಂಡಿಕೆ (1)ರ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯ ಪಠ್ಯಕ್ರಮದ ಅನುಸಾರ ಪರೀಕ್ಷೆಗಳನ್ನು ನಡೆಸುತ್ತಿದ್ದು ಸದರಿ ಕಂಡಿಕೆಯನ್ನು ಕಂಡಿಕೆ (1) ಪರಿಗಣಿಸಿರುವುದು.

**ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಹುಬ್ಬಳ್ಳಿ**

| ಕ್ರ. ಸಂ. | ಕಮರ್ಷಿಯಲ್ ಪ್ರಾಕ್ಟೀಸ್ ಡಿಪ್ಲೊಮೊ | ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಪರೀಕ್ಷೆಗಳಿಗೆ ತತ್ಸಮಾನತೆ |
|---|---|---|
| 1. | 3ನೇ ಮತ್ತು 4ನೇ ಸೆಮಿಸ್ಟರ್ ಬೆರಳಚ್ಚು ಮತ್ತು ಶೀಘ್ರಲಿಪಿ ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಬೆರಳಚ್ಚು ಮತ್ತು ಶೀಘ್ರಲಿಪಿ ಪ್ರಥಮ ದರ್ಜೆಗೆ ತತ್ಸಮಾನ |
| 2. | 5ನೇ ಮತ್ತು 6ನೇ ಸೆಮಿಸ್ಟರ್ ಬೆರಳಚ್ಚು ಮತ್ತು ಶೀಘ್ರಲಿಪಿ ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಬೆರಳಚ್ಚು ಮತ್ತು ಶೀಘ್ರಲಿಪಿ ಪ್ರೌಢ ದರ್ಜೆಗೆ ತತ್ಸಮಾನ |

**ಸೂಚನೆ:** 1999-2000ನೇ ಶೈಕ್ಷಣಿಕ ಸಾಯತ್ತತೆ ಪಡೆದ ಈ ಸಂಸ್ಥೆಯು ಸದರಿ ವಿಷಯಗಳು ಪಠ್ಯ ಕ್ರಮದಲ್ಲಿ ಇಲ್ಲಿಯವರೆವಿಗೂ ಯಾವುದೇ ಬದಲಾವಣೆ ಇರುವುದಿಲ್ಲ.

ಟಿ.ವಿ.ವಿ.ಎಸ್ ಪಾಲಿಟೆಕ್ನಿಕ್, ಬಾಗಲಕೋಟೆ (1999-2000 ದಿಂದ 2002ರ ವರೆವಿಗೆ)

| | | |
|---|---|---|
| 1. | 5ನೇ ಮತ್ತು 6ನೇ ಸೆಮಿಸ್ಟರ್ ಬೆರಳಚ್ಚು ಮತ್ತು ಶೀಘ್ರಲಿಪಿ ತೇರ್ಗಡೆ | ವಾಣಿಜ್ಯ ಪರೀಕ್ಷೆಗಳ ಬೆರಳಚ್ಚು ಮತ್ತು ಶೀಘ್ರಲಿಪಿ ಪ್ರೌಢ ದರ್ಜೆಗೆ ತತ್ಸಮಾನ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1652

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

## FOREST, ECOLOGY AND ENVIRONMENT SECRETARIAT

**Sub :** Transfer of lease for 39.84 ha. relating to 12 MW to the investors/power producers (new User Agencies), out of already diverted 70.01 ha. of forest land for establishment of 31.2 MW Wind Power Project in favour of M/s Logaer Machines(India) Limited in and around Hill Ranges of Bukkapatna State Forest in Chickanayakanahalli and Gubbi Taluks in Tumkur District of Karnataka.

**Read :**
1) Letter No. F.No.8-97/2005-FC, dated: 2-1-2006 of Government of India, Ministry of Environment and Forests, New Delhi.
2) Government Order No. FEE 164 FLL 2005, dated: 25-1-2006.
3) Letter No. A5(3)GFL.CR.7/05-06, dated: 16-9-2006 of the Principal Chief Conservator of Forests, Bangalore.
4) State Government letter No. FEE 173 FLL 2006, dt: 18-9-2006
5) Letter No. F.No.8-97/2005-FC, dated: 09-10-2006 of Government of India, Ministry of Environment and Forests, New Delhi.

**PREAMBLE:**

Government of India in its letter read at (1) above has accorded approval under Forest (Conservation) Act,1980 for diversion of 70.01 ha. of forest land for establishment of 31.2 MW Wind Power Project in favour of M/s Logaer Machines(India) Limited in and around hill ranges of Bukkapatna State Forest in Chickanayakanhalli and Gubbi Taluks in Tumkur District of Karnataka subject to certain conditions.. Accordingly in Government Order dt: 25-1-2006 read at (2) above sanction has been accorded for diversion of said land in favour M/s Logaer Machines(India) Limited subject to certain conditions.

The Principal Chief Conservator of Forests, Bangalore vide his letter dated: 16-9-2006 read at (3) above had submitted proposal to obtain the approval of Government of India as per the Government of India's guidelines dated: 14.5.2004 issued under Forest (Conservation) Act, 1980 for transfer of lease of forest lands diverted for establishment of Wind Power Project to the New User Agencies i.e. investor/Power Producers according to the following statement.

| Name of the Village | Sy.No. | Extent(In ha.) | Number of WEGs of 800 KW each |
|---|---|---|---|
| Siddapura | 05 | 25.34 | 09 |
| Annenahalli | 31 | 7.79 | 06 |
| Balekona | 01 | 2.6 | - |
| Hosahalli | 27 | 2.28 | = |
| Purushanahalli | 01 | 1.18 | - |
| Hanumantanahalli | 46 | 0.65 | - |
| **Total** | | **39.84** | **15(12 MW)** |

The original user agency M/s Logaer Machines(India) Limited has proposed to transfer 39.84 ha. of forest land to the new user agency, remaining 30.17 ha. of leased forest land is left as it is. The original user agency has submitted N.O.C. for such transfer and new user agency have submitted an under taking that they will abide by the conditions stipulated by Government of India and Government of Karnataka.

Accordingly the proposal was recommended to Government of India vide State Government letter dated 18-9-2006 read at (4) above.

Government of India, Ministry of Environment and Forests, New Delhi vide their letter dated: 09-10-2006 read at (5) above has conveyed its approval for transfer of lease from M/s Logaer Machines(India) Limited the original user agency, to new User Agencies i.e., investors/power producers, subject to certain conditions.

The proposal has been examined in detail and hence the order.

**Government Order No. FEE 173 FLL 2006, Bangalore, Dated:14th November 2006.**

In the circumstances explained above, Government are pleased to accord sanction under Section 2 of Forest(Conservation)Act, 1980 for transfer of lease from M/s Logaer Machines(India) Limited, the original User Agency, to the new User Agencies i.e., the investors/power producers for 39.84 ha. relating to 12 MW, out of already diverted 70.01 ha. of forest land for establishment of 31.2 MW Wind Power Project as indicated below:

| Name of the Village | Sy.No | Extent (In ha.) | Number of WEGs of 800 KW each | Name of the Investor/New User Agency | Remarks |
|---|---|---|---|---|---|
| Siddapura | 05 | 25.34 | 09 | M/s Enercon Wind Farms (Hindustan) Private Limited, Bangalore. | The remaining area of 30.17 ha. (70.01-39/84) shall be left under the control of the original User Agency M/s Logaer Machines(India) Limited. |
| Annenahalli | 31 | 7.79 | 06 | | |
| Balekona | 01 | 2.6 | - | | |
| Hosahalli | 27 | 2.28 | - | | |
| Purushanahalli | 01 | 1.18 | - | | |
| Hanumantanahalli | 46 | 0.65 | - | | |
| **Total** | | **39.84** | **15(12 MW)** | | |

The transfer of lease is subject to the condition that the new User Agencies, i.e, the investors/power producers, shall abide by all the conditions imposed by the Central Government/State Government/ Principal Chief Conservator of Forests for diversion of 70.01 ha. of forest land for establishment of 31.2 MW Wind Power Project in favour of M/s Logaer Machines(India) Limited, in and around hill ranges of Bukkapatna State Forest in Chickanayakanhalli and Gubbi Taluks in Tumkur District of Karnataka

By Order and in the name of the Governor of Karnataka,

**P.R. KALAVATHI**

Under Secretary to Government,

Frest, Ecology and Environment Department.

P.R. 1657

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಸುವರ್ಣ ಕರ್ನಾಟಕ ಸಾಂಸ್ಕೃತಿಕ ದಿಬ್ಬಣ ಏರ್ಪಡಿಸಲು ಅನುದಾನ ಮಂಜೂರಾತಿ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ:ಸಂಕಇ:136:ಕರಅ:2005, ದಿನಾಂಕ:29.7.06.

2) ಆಯುಕ್ತರು ಸುವರ್ಣ ಕರ್ನಾಟಕ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಸನಿ/1/ದಿಬ್ಬಣ/2005-06 ದಿನಾಂಕ: 13.9.2006.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಸುವರ್ಣ ಸಾಂಸ್ಕೃತಿಕ ದಿಬ್ಬಣ ಏರ್ಪಡಿಸಲು ರೂ.65.00 ಲಕ್ಷ ಮಂಜೂರಾತಿ ನೀಡಿ 2006-07ರ ಕ್ರಿಯಾ ಯೋಜನೆಯಡಿ ಅವಕಾಶ ಮಾಡಿಕೊಂಡ ರೂ.55.00 ಲಕ್ಷಗಳ ಪೈಕಿ ರೂ.50.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು. ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರು ಈ ದಿಬ್ಬಣಕ್ಕಾಗಿ ವಾರ್ತಾ ಇಲಾಖೆಯು ಈಗ ಪ್ರಸ್ತಾವನೆ ಸಲ್ಲಿಸಿ ಹೆಚ್ಚುವರಿ ಹಣವನ್ನು ಬಿಡುಗಡೆಗೊಳಿಸಲು ಕೋರಿಕೆ ಸಲ್ಲಿಸಿದೆ. ಈ ದಿಬ್ಬಣಕ್ಕೆ ವಾಹನ ಇಂಧನ, ಸ್ತಬ್ದ ಚಿತ್ರಗಳು, ಕಲಾವಿದರ ಸಂಭಾವನೆ, ಪುಸ್ತಕ ಪ್ರದರ್ಶನ, ಮಳಿಗೆ ವೆಚ್ಚ, ಊಟದ ವ್ಯವಸ್ಥೆ ಹಾಗೂ ಇನ್ನಿತರೆ ವೆಚ್ಚಗಳಿಗಾಗಿ ರೂ.50.00 ಲಕ್ಷಗಳ ವೆಚ್ಚ ಬರುತ್ತಿದ್ದು, ಈ ಹಣವನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿದ್ದಾರೆ. ದಿನಾಂಕ:25.8.06 ರಂದು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಮನ್ವಯ ಸಮಿತಿ ಸಭೆ ತೀರ್ಮಾನದಂತೆ ರೂ.50.00 ಲಕ್ಷಗಳನ್ನು ಹೆಚ್ಚುವರಿಯಾಗಿ ಈ ಉದ್ದೇಶಕ್ಕಾಗಿ ನೀಲು ತೀರ್ಮಾನಿಸಿದ್ದು, ಸದರಿ 50.00 ಲಕ್ಷ ಹಾಗೂ ಕ್ರಿಯಾ ಯೋಜನೆ ಪ್ರಕಾರ ಬಿಡುಗಡೆಗೊಳಿಸಬೇಕಾದ ಉಳಿದ ಹಣ ರೂ.5.00 ಲಕ್ಷ ಹೀಗೆ ಒಟ್ಟಾರೆ ರೂ.55.00 ಲಕ್ಷ ಬಿಡುಗಡೆ ಮಾಡಲು ಪ್ರಸ್ತಾವನೆಯಲ್ಲಿ ಕೋರಿದ್ದು, ಈ ಪ್ರಸ್ತಾವನೆಯನ್ನು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಸಂಕಇ 136 ಕರಅ 2005, ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2006-07ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಸಾಂಸ್ಕೃತಿಕ ದಿಬ್ಬಣಕ್ಕೆ ಈಗಾಗಲೇ ಬಿಡುಗಡೆಗೊಳಿಸಿ ಉಳಿದ ಮೊತ್ತ ರೂ.5.00 ಲಕ್ಷ ಹಾಗೂ ಇತರೆ ಇಲಾಖೆಗಳಿಗೆ ಹಂಚಿಕೆ ಮಾಡಲು ಮೀಸಲಿರಿಸಿದ ರೂ.20.00 ಕೋಟಿಗಳಲ್ಲಿ ರೂ.50.00 ಲಕ್ಷ ಹೆಚ್ಚುವರಿ ಮೊತ್ತ ಹೀಗೆ ಒಟ್ಟಾರೆ ರೂ.55.00 ಲಕ್ಷ (ರೂಪಾಯಿ ಐವತ್ತೈದು ಲಕ್ಷಗಳು ಮಾತ್ರ) ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರಿಗೆ ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-102-4-09-059 (ಯೋಜನೆ)ಯಡಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್.ಡಿ.21.ಪಿ.ಎಫ್.ಪಿ.2006, ದಿನಾಂಕ:2.9.2006ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 1448

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಸಂಸ್ಕೃತಿ)

**ವಿಷಯ :** ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು ಇಂಚಗೇರಿ ಗ್ರಾಮದಲ್ಲಿ ಸುವರ್ಣ ಕರ್ನಾಟಕ ಅಂಗವಾಗಿ ಗಡಿನಾಡ ಕನ್ನಡ ಭವನ ನಿರ್ಮಿಸಲು ಹಣ ಮಂಜೂರಾತಿ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಪತ್ರ ಸಂಖ್ಯೆ:ಕಸನಿ/4/ ಸುಕ/2005-06/3) ದಿನಾಂಕ: 13.9.2006.

**ಪ್ರಸ್ತಾವನೆ :**

ಓದಲಾದ ಪತ್ರಲ್ಲಿ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು 2006-07ನೇ ಸಾಲಿನಲ್ಲಿ ಸುವರ್ಣ ಕರ್ನಾಟಕ ವರ್ಷಾಚರಣೆಯ ಅಂಗವಾಗಿ ಗಡಿ ಭಾಗಗಳಲ್ಲಿ ಗಡಿ ನಾಡ ಕನ್ನಡ ಬವನ ಎಂಬ ಯೋಜನೆಯನ್ನು ಹಮ್ಮಿಕ್ರೊಳ್ಳಲಾಗಿದೆ. ಈ ಯೋಜನೆಯಡಿ ಬೆಳಗಾವಿ, ಬಿಜಾಪುರ, ಚಾಮರಾಜನಗರ, ಕೋಲಾರ, ದಕ್ಷಿಣ ಕನ್ನಡ ಈ 5 ಜಿಲ್ಲೆಗಳಲ್ಲಿ ಸರಳವಾಗಿ ಗಡಿನಾಡ ಕನ್ನಡ ಭವನಗಳನ್ನು ನಿರ್ಮಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ. ಈ ಯೋಜನೆಗಾಗಿ ಒಟ್ಟಾರೆ ರೂ.100.00 ಲಕ್ಷಗಳನ್ನು ಹಂಚಿಕೆ ಮಾಡಿಕೊಳ್ಳಲಾಗಿದ್ದು, ಅಂದರೆ ಒಂದು ಗಡಿನಾಡ ಭವನ ನಿರ್ಮಾಣಕ್ಕೆ ರೂ.20.0 ಲಕ್ಷಗಳ ಅವಕಾಶವನ್ನು ಕಲ್ಪಿಸಿಕೊಳ್ಳಲಾಗಿರುತ್ತದೆ. ಈ ಯೋಜನೆಯಡಿ ಬಿಜಾಪುರ ಜಿಲ್ಲೆಯ ಗಡಿಭಾಗವಾದ ಇಂಡಿ ತಾಲ್ಲೂಕು ಇಂಚಗೇರಿ ಗ್ರಾಮದಲ್ಲಿ ಗಡಿನಾಡ ಕನ್ನಡ ಭವನ ನಿರ್ಮಿಸಲು ರೂ. 20.00 ಲಕ್ಷಗಳನ್ನು ಬಿಡುಗಡೆಗೊಳಿಸುವಂತೆ ಕೋರಿ ವಿವರವಾದ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಸಂಕಇ 229 ಕರಅ 2006, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2006-07ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಸುವರ್ಣ ಕರ್ನಾಟಕ ಗಡಿ ಭವನ ನಿರ್ಮಿಸಲು ಅವಕಾಶ ಮಾಡಿಕೊಂಡ ರೂ. 100.00 ಲಕ್ಷಗಳಲ್ಲಿ ರೂ. 20.00 ಲಕ್ಷ (ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಬಿಜಾಪುರ ಜಿಲ್ಲೆಯ ಗಡಿ ಭಾಗವಾದ ಇಂಡಿ ತಾಲ್ಲೂಕಿನ ಇಂಚಗೇರಿ ಗ್ರಾಮದಲ್ಲಿ ಸುವರ್ಣ ಕರ್ನಾಟಕ ಅಂಗವಾಗಿ ಗಡಿನಾಡ ಕನ್ನಡ ಭವನ ನಿರ್ಮಿಸಲು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲಾಗಿದೆ.

1. ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ವಿನಿಯೋಗಿಸತಕ್ಕದ್ದು.
2. ಜಾರಿಯಲ್ಲಿರುವ ನಿಯಮಗಳನ್ನು ಪಾಲಿಸುವುದರ ಜೊತೆಗೆ ಸರ್ಕಾರದ ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆ ಮಾಡಿದ ಬಗ್ಗೆ ಲೆಕ್ಕಪರಿಶೋಧಕರಿಂದ ದೃಢೀಕರಿಸಿದ ವೆಚ್ಚಪಟ್ಟಿ ಹಾಗೂ ಹಣಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.
3. ಕಟ್ಟಡ ಪೂರ್ಣಗೊಂಡ ನಂತರ ಲೋಕೋಪಯೋಗಿ ಇಲಾಖೆಯಿಂದ ಮೌಲ್ಯಮಾಪನ ಪ್ರಮಾಣಪತ್ರವನ್ನು ಪಡೆದು ಸಲ್ಲಿಸುವುದು.
4. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಅಧಿನಿಯಮ 1999 ನಿಯಮ 2000 ಮತ್ತು ಸರ್ಕಾರದಿಂದ ಆಗಿಂದಾಗ್ಗೆ ಹೊರಡಿಸಿದ ಸರ್ಕಾರದ ಸುತ್ತೋಲೆಗಳಲ್ಲಿನ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-102-4-09-059 (ಯೋಜನೆ)ಯಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್.ಡಿ.21 ಟಿ.ಎಫ್.ಪಿ.2006, ದಿನಾಂಕ:2.9.2006ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಇಡಿ/909/ಐಎ ಎಫ್.(ಬಿಎ) 2006 ದಿ: 6.10.2006ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 1495

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಸಂಸ್ಕೃತಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಶಿಕ್ಷಣ ಇಲಾಖೆಯಲ್ಲಿ ವಿಶೇಷಾಧಿಕಾರಿ (ನ್ಯಾಯಾಲಯ ಪ್ರಕರಣಗಳು) ಹುದ್ದೆಯನ್ನು ಸೃಜಿಸುವ ಬಗ್ಗೆ.

**ಪ್ರಸ್ತಾವನೆ :**

ಶ್ರೀ ಹೆಚ್. ಗಂಗಯ್ಯ, ನಿರ್ದೇಶಕರು, ಸರ್ಕಾರಿ ಮುದ್ರಣಾಲಯ ಇವರನ್ನು ಸಚಿವಾಲಯ ಇಲಾಖೆಯಲ್ಲಿ ವಿಶೇಷಾಧಿಕಾರಿ (ನ್ಯಾಯಾಲಯ ಪ್ರಕರಣಗಳು) ಎಂಬ ಹುದ್ದೆಯನ್ನು ಸೃಜಿಸಿ ಪ್ರಸ್ತಾವನೆ ಇದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 82 ಸಸಿವಿ 2006, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಶಿಕ್ಷಣ ಇಲಾಖೆಯಲ್ಲಿ ವಿಶೇಷಾಧಿಕಾರಿ (ನ್ಯಾಯಾಲಯ ಪ್ರಕರಣಗಳು) ಎಂಬ ವೇತನ ಶ್ರೇಣಿ ರಹಿತ ಹೊಸ ಹುದ್ದೆಯನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 2040 ವೆಚ್ಚ/5 2006, ದಿನಾಂಕ: 24.11.2006 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1693

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-2)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಸುವರ್ಣ ಕರ್ನಾಟಕ ಅಂಗವಾಗಿ ವಿಶ್ವಕೋಶದ ಮರು ಮುದ್ರಣಕ್ಕೆ ಹಣ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ:ಕಸನಿ/ಸುಕ/5ಆ 2006-07 ದಿನಾಂಕ: 9.8.2006.

**ಪ್ರಸ್ತಾವನೆ :**

ಓದಲಾದ ಪತ್ರದಲ್ಲಿ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಸುವರ್ಣ ಕರ್ನಾಟಕ ಆಚರಣೆ ಅಂಗವಾಗಿ ಮೈಸೂರು ವಿಶ್ವವಿದ್ಯಾಲಯವು ಹೊರತಂದಿರುವ ವಿಶ್ವಕೋಶ ಮತ್ತು ಇಂಗ್ಲೀಷ್ ಕನ್ನಡ ನಿಘಂಟನ್ನು ಮರು ಮುದ್ರಣ ಮಾಡುವ ಯೋಜನೆಯನ್ನು ರೂಪಿಸಿಕೊಂಡು 2006-07ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ರೂ. 70.00 ಲಕ್ಷಗಳ ಅವಕಾಶ ಮಾಡಿಕೊಳ್ಳಲಾಗಿದೆ. ಆದರೆ ಈ ಕಾರ್ಯವನ್ನು ನಿರ್ದೇಶಕರು ಹಾಗೂ ಪ್ರಧಾನ ಸಂಪಾದಕರು ಕನ್ನಡ ವಿಶ್ವಕೋಶ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ಇವರು ವಹಿಸಿಕೊಂಡಿದ್ದು ಹಣ ಬಿಡುಗಡೆಗಾಗಿ ಈ ಯೋಜನೆಯ ಪೂರ್ಣ ವಿವರಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿ ಹಣ ಬಿಡುಗಡೆಗಾಗಿ ಕೋರಿದ್ದಾರೆ. ಪ್ರಸ್ತಾವನೆಯನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಸಂಕಇ 16 ಕಪ್ರದ 2006, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2006-07ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಸುವರ್ಣ ಕರ್ನಾಟಕ ಯೋಜನೆಯಡಿ ವಿಶ್ವಕೋಶ ಮತ್ತು ಇಂಗ್ಲೀಷ್ ಕನ್ನಡ ನಿಘಂಟನ್ನು ಮರು ಮುದ್ರಣಗೊಳಿಸಲು ಅವಕಾಶ ಮಾಡಿಕೊಂಡ ರೂ. 70.00 ಲಕ್ಷಗಳನ್ನು (ಎಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ವಿಶ್ವಕೋಶ ಮರು ಮುದ್ರಣಕ್ಕೆ ನಿರ್ದೇಶಕರು ಹಾಗೂ ಪ್ರಧಾನ ಸಂಪಾದಕರು ಕನ್ನಡ ವಿಶ್ವಕೋಶ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ಇವರಿಗೆ ಈ ಕೆಳಕಂಡ ಷರತ್ತುಗಳೊಂದಿಗೆ ಮಂಜೂರು ಮಾಡಲಾಗಿದೆ.

1. 14 ಸಂಪುಟಗಳಲ್ಲಿ ಪ್ರಕಟವಾಗಿರುವ ವಿಶ್ವಕೋಶವನ್ನು ಈವತ್ತಿನ ಸಂದರ್ಭಕ್ಕೆ ಅನುಸಾರವಾಗಿ ಪರಿಷ್ಕರಿಸಿ 20 ಪರಿಷ್ಕೃತ ಸಂಪುಟಗಳಲ್ಲಿ ಹೊರತರುವುದು.
2. ಮೊದಲ ಹಂತದಲ್ಲಿ ಸುವರ್ಣ ಕರ್ನಾಟಕ ವರ್ಷಾರಂಭದ 2006ರ ನವೆಂಬರ್ ವೇಳೆಗೆ 7 ಸಂಪುಟಗಳನ್ನು 2ನೇ ಹಂತದಲ್ಲಿ 7 ಸಂಪುಟಗಳನ್ನು 2007ರ ನವೆಂಬರ್ ವೇಳೆಗೆ ಉಳಿದ ಸಂಪುಟಗಳನ್ನು 2008ರ ಮಾರ್ಚ್ ವೇಳೆಗೆ ಪ್ರಕಟಿಸುವುದು.
3. ಪ್ರತಿ ಸಂಪುಟದ 5000 ಪ್ರತಿಗಳನ್ನು ಮುದ್ರಿಸುವುದು.
4. ಮುದ್ರಿತ ಪ್ರತಿ ಸಂಪುಟದ 500 ಪ್ರತಿಗಳನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಉಚಿತವಾಗಿ ಸಲ್ಲಿಸುವುದು.
5. ಪುಸ್ತಕಕ್ಕೆ ತಗಲುವ ವೆಚ್ಚದ 2 ರಷ್ಟು ಬೆಲೆ ನಿಗದಿಪಡಿಸುವುದು.
6. ಸುವರ್ಣ ಕರ್ನಾಟಕ ಪ್ರಯುಕ್ತ ಸನ್ಮಾನ್ಯ ಮುಖ್ಯಮಂತ್ರಿಗಳ ಮುನ್ನುಡಿಯನ್ನು ಸೇರಿಸುವುದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-102-4-09-059 (ಯೋಜನೆ)ಯಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್.ಡಿ.21 ಟಿ.ಎಫ್.ಪಿ.2006, ದಿನಾಂಕ:2.9.2006ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಇಡಿ/892/ಐಎ ಎಫ್.(ಬಿಎ) 2006 ದಿ: 6.10.2006ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 1496

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಸಂಸ್ಕೃತಿ)